# ಮುನ್ನುಡಿ

ಈ ಸಂಸಾರದ ಕಷ್ಟಸಂಕಷ್ಟಗಳೂ ಕಾಯಿಲೆ ಕಸಾರಿಕೆಗಳೂ ದೆವ್ವದೇವತೆಗಳಿಂದ ಪ್ರಾಪ್ತವಾಗುತ್ತವೆಂದು ನಂಬಿ, ಹಣ್ಣುಕಾಯಿಯ ಹರಿಕೆಯಿಂದಾಗಲೀ, ರಕ್ತಮಾಂಸದ ಬಲಿಯಿಂದಾಗಲೀ ಅವುಗಳ ಉಗ್ರತೆಯನ್ನು ಶಮನಿಸಲು ಪ್ರಯತ್ನಪಟ್ಟು ಬಹುಕಾಲದಿಂದ ಅವನ್ನು ನಂಬಿಕೊಂಡು ಬಂದಿರುವ ಸೀಮೆಗಳಲ್ಲಿ ತುಳುನಾಡು ಒಂದಾಗಿದೆ. ಇಲ್ಲಿ ಗ್ರಾಮಕ್ಕೆ ಒಂದರಂತೆ 'ಭೂತ' ಇದೆ; ಆ ಭೂತದ ಸಲುವಾಗಿ ವರ್ಷಕ್ಕೊಂದು ಜಾತ್ರೆ ಇದೆ; ಜಾತ್ರೆಯಲ್ಲಿ ಭೂತದ ವೇಷವನ್ನು ಆವೇಶದಿಂದ ಕುಣಿಯತಕ್ಕ ಪ್ರತ್ಯೇಕ ಜಾತಿಯವರೂ ಇದ್ದಾರೆ. ಭೂತವು ಮೈದುಂಬಿ ಬರುವ ಮೊದಲು ವೇಷಗಾರನು ಎರಡು ಮೂರು ತಾಸುಗಳ ತನಕ ಒಂದೇ ತೆರನಾಗಿ ಸ್ವರವೆತ್ತಿ ತುಳು ಹಾಡನ್ನು ಹೇಳುವನು. ಇದಕ್ಕೆ 'ಭೂತದ ಸಂಧಿ' ಎಂಬ ಹೆಸರೇ ತುಳುನಾಡಿನಲ್ಲಿ ವಾಡಿಕೆಯಾಗಿದೆ. ಆಯಾ ಭೂತದ ಚರಿತ್ರೆಯು ಆಯಾ ಭೂತದ ಸಂಧಿಯಲ್ಲಿ ಬಹುಮಟ್ಟಿಗೆ ಅಡಕವಾಗಿದೆ. "ಕೋಟಿಚೆನ್ನಯ" ಎಂಬೀ ಭೂತಗಳ 'ಸಂಧಿಯನ್ನು' ಅವಲಂಬಿಸಿ ಬರೆದ ಈ ಪುಸ್ತಕದಲ್ಲಿನ ಕಥೆಯನ್ನು ಆ ಭೂತ ಕಟ್ಟುವ ತುಳುವರ ಬಾಯಿಯಿಂದ ಈಗಲೂ ಕೇಳಬಹುದು.

ನಾನು ಈ ಕಥೆಯನ್ನು ಎನೆಕಲ್ಲು ಉಪಾಧ್ಯಾಯರಾದ ಕೈ.ವಾ.ರಾ.ಉಕ್ಕಣ್ಣ ಗೌಡರ ಪ್ರಯತ್ನದಿಂದ ೧೯೦೮ರಲ್ಲಿ ಹೆಕ್ಕಿಕೊಂಡನಂತರ ಇದೇ ಕಥೆಯ ಇಂಗ್ಲೀಷ್ ಭಾಷಾಂತರವನ್ನು 'ಇಂಡಿಯನ್ ಎಂಟಿಕ್ವೇರಿ' ಎಂಬ ಇಂಗ್ಲೀಷ್ ಮಾಸಪತ್ರಿಕೆಯ ಹಳೆಯ ಸಂಚಿಕೆಯಲ್ಲಿ ಓದಿ, ಇದರ ಮೂಲವು ಡಾಕ್ಟರ್ ಮೊಗ್ಲಿಂಗ್ ಎಂಬವರಿಂದ ಸಂಗ್ರಹಿಸಲ್ಪಟ್ಟ 'ಪಾಡ್ದೊನೆಳು' ಎಂಬ ಪುಸ್ತಕದಲ್ಲಿದೆ ಎಂದುತಿಳಿದು ಆ ಪುಸ್ತಕವನ್ನು ೧೯೦೯ರಲ್ಲಿ ಸಂಪಾದಿಸಿಕೊಂಡೆನು.

ಡಾಕ್ಟರ್ ಮೊಗ್ಲಿಂಗರ ತುಳು 'ಪಾಡ್ದೊನೆಯಲ್ಲಿಯೂ' ನಾನು ಕೇಳಿದ್ದ ಕೋಟಿ ಚೆನ್ನಯರ 'ಸಂಧಿ'ಯಲ್ಲಿಯೂ ಮುಖ್ಯವಾದ ಕಥಾಭಾಗವು ಒಂದೇಯಾಗಿದ್ದರೂ, ಅಲ್ಲಲ್ಲಿ ಅನೇಕ

ವ್ಯತ್ಯಾಸಗಳು ಕಂಡು ಬಂದುದರಿಂದ, ಕಥೆಯ ರಂಗಸ್ಥಳಗಳಾಗಿದ್ದ ಪಂಜ, ಪಡುಮಲೆ ಎಂಬೀ ಗ್ರಾಮಗಳನ್ನು ಸಂಚರಿಸಿ, ಅಲ್ಲಿಯ ಭೂತಕಟ್ಟುವವರಿಂದ ಈ ಕಥೆಯ ಬೇರೆ ಬೇರೆ ಪಾಠಾಂತರಗಳನ್ನು ಸಂಗ್ರಹಿಸಿ, ಎಂಟು ವರ್ಷಗಳ ತರುವಾಯ ಎಂದರೆ ೧೯೧೭ರಲ್ಲಿ ಡಾಕ್ಟರ್ ಮೊಗ್ಲಿಂಗರ ತುಳು 'ಪಾಡ್ದೊನೆ' ಯನ್ನು ನನ್ನ ಸ್ನೇಹಿತರಾದ ರಾ.ರಾ.ಆರ್.ಎಸ್.ಬಾಗಲೋಡಿಯವರಿಂದ ಯಥಾಮತಿಯಾಗಿ ಕನ್ನಡಿಸಿ ಕಥೆಯನ್ನು ಪ್ರಕಟಿಸಬೇಕೆಂದು ಯತ್ನಿಸಿದೆನು. ಇದ್ದುದನ್ನು ಇದ್ದ ಹಾಗೆಯೇ ಪ್ರಕಟಿಸಲೋ ಎಂದರೆ ಕಥಾ ಭಾಗಗಳು ಒಂದಕ್ಕೊಂದು ಹೊಂದಿಕೆಯಾಗಿರದೆ, ಕಥೆಯ ಸಂವಿಧಾನಕ್ಕೆ ಭಂಗಬರುತ್ತದೆ. ಕಥೆಯನ್ನು ಬೇಕಾದಂತೆ ಪಲ್ಲಟಿಸಿ ಬರೆಯಲೋ ಎಂದರೆ, ಪುರಾತನ ವಿಗ್ರಹಕ್ಕೆ ಬೊಟ್ಟಿಟ್ಟ ದೋಷವು ಬರುತ್ತದೆ. - ಹೀಗೆ ಏನು ಮಾಡಬೇಕೆಂದು ನಾನು ದೃಢ ಮಾಡಲಾರದೆ, ಕೈಬರಹದ ನನ್ನ ಪ್ರತಿಗಳನ್ನು ಇನ್ನೂ ಎಂಟು ವರ್ಷಗಳವರೆಗೆ ಕಟ್ಟಿ ಇಟ್ಟಿದ್ದೆನು. ಗೆದ್ದಲ ಬಾಯಿಯಿಂದ ತಪ್ಪಿಸಿಕೊಂಡ ಆ ಹಳೆಯ ಕಾಗದಗಳನ್ನು ಇನ್ನೊಮ್ಮೆ ನೋಡಿ ಈಗ ಮುದ್ರಿಸುವುದಕ್ಕೆ ಇತ್ತಲಾಗಿನ ಮಂಗಳೂರು ವಾರ್ತಾಪತ್ರಿಕೆಗಳಲ್ಲಿ ಕೋಟಿ ಚೆನ್ನಯರ ವಿಷಯವಾಗಿ ಒಂದೆರಡು ಲೇಖಗಳು ಪ್ರಕಟವಾದದ್ದೇ ಕಾರಣವಾಯಿತು.

ಅಕ್ರಮ, ವ್ಯರ್ಥ, ಪುನರುಕ್ತ, ಅಪಾರ್ಥ, ಹತೋಪಮೆ, ಲೋಕನ್ಯಾಯವಿರುದ್ಧತೆ ಎಂಬೀ ವಚನ ದೋಷಗಳಲ್ಲಿ ಮೊದಲನೆಯ ಮೂರು ದೋಷಗಳು ಮಾತ್ರವೇ ಮೂಲ ಕಥೆಯಲ್ಲಿ ಇದ್ದುದರಿಂದ ಅವನ್ನು ತೆಗೆದುಬಿಟ್ಟು, ನನಗೆ ದೊರೆತಿದ್ದ ಪಾಠಾಂತರಗಳಲ್ಲಿಯ ಕಥಾ ಭಾಗಗಳೆಲ್ಲಾ ಒಂದನ್ನೊಂದು ಹೊಂದುವಂತೆ ಮಾಡಿ ಕೋಟಿ ಚೆನ್ನಯರ ತುಳು 'ಪಾಡ್ದೊನೆ'ಯನ್ನು ಕನ್ನಡಿಸಿರುತ್ತೇನೆ. ಮೂಲದಲ್ಲಿದ್ದ ಒಂದೆರಡು ಅಸಹ್ಯ ಪ್ರಸಂಗಗಳನ್ನೂ ಚರ್ವಿತಚರ್ವಣವನ್ನೂ ಕಥಾನಾಯಕರ ಭೀಕರವಾದ ಕ್ರೌರ್ಯವನ್ನೂ ಬಿಟ್ಟುಬಿಟ್ಟು, ಬ್ರಾಹ್ಮಣ ಜೋಯಿಸನ ವೃತ್ತಾಂತವನ್ನೂ ಪಡುಮಲೆ ಬೀಡಿನ ದಹನ ಪ್ರಸ್ತಾಪವನ್ನೂ ಕಥೆಯ ಚೌಕಟ್ಟಿನಲ್ಲಿ ನೂತನವಾಗಿ ಸೇರಿಸಿರುತ್ತೇನೆ.

ಮಳೆಗಾಲದ ಹಗಲು ಹೊತ್ತಿನಲ್ಲಿ ತುಳುನಾಡಿನ ಒಕ್ಕಲಿಗನು ನಾಟಿ ಕೆಲಸವನ್ನು ಮುಗಿಸಿ, ಹೊತ್ತು ಮುಳುಗುವುದರೊಳಗೆ ತನ್ನ ಹುಲ್ಲುಮನೆಯನ್ನು ಸೇರಿಕೊಂಡು ಬೇಗನೆ ಊಟ ಮಾಡಿ, ಜೊಯ್ಯೆಂದು ಹೊರಗೆ ಸುರಿಯುತ್ತಿದ್ದ ಕಾರತಿಂಗಳ ಮಳೆಯಿಂದ ರಾತ್ರಿಯ ಕತ್ತಲು

ಭಯಂಕರವಾಗಿ ಕಾಣುತ್ತಿದ್ದಾಗ ಮಿಣಮಿಣತೆ ಉರಿಯುವ ಬೆಳಕಿನ ಬಳಿಯಲ್ಲಿ ಕುಳಿತುಕೊಂಡು, ದುಡಿಯಿಂದ ತಾಳಹಾಕಿ, ಬಾಯಿಂದ ರಾಗವೆತ್ತಿ ಹಾಡುವ ಪಾಡ್ದೊನೆಯನ್ನು ಕೇಳಿ ಉಂಟಾಗುವ ರಸಸ್ವಾದನೆಯು ಈ ಕನ್ನಡಗದ್ಯದ ಒಣ ಮಾತುಗಳನ್ನು ಓದುವುದರಿಂದ ಉಂಟಾಗಲಾರದೆಂದು ನನಗೆ ಗೊತ್ತಿದೆ. ಆದರೂ ತುಳುನಾಡಿನಲ್ಲಿ ಆಗಿಹೋದ ಈ ಪುರಾತನ ವೀರರು ಕರ್ನಾಟಕದ, ತುಳುವರಲ್ಲದವರ ಹೃದಯದಲ್ಲಿ ಚಿರಕಾಲ ಜೀವಂತರಾಗಿ ಇರಬೇಕೆಂಬ ಉದ್ದೇಶದಿಂದ ಈ ಹಳೆಯ ತುಳುಕಥನವನ್ನು ಕನ್ನಡಕ್ಕೆ ಪರಿವರ್ತಿಸಿ, ಹೊಸರೂಪದಲ್ಲಿ ಬರೆದಿದ್ದೇನೆ. ಇದರಲ್ಲಿ ಇರಬಹುದಾದ ಕುಂದುಕೊರತೆಗಳನ್ನು ದೇಶಾಭಿಮಾನಿಗಳೂ ಭಾಷಾಭಿಮಾನಿಗಳೂ ಆದ ಕನ್ನಡಿಗರು ಮನ್ನಿಸಬೇಕಾಗಿ ನಾನು ಸೆರಗೊಡ್ಡಿ ಬೇಡಿಕೊಳ್ಳುತ್ತೇನೆ.

ಮಡಿಕೇರಿ ಪಂಜೆಮಂಗೇಶರಾಯ

**ಒಂದನೆಯ ಭಾಗ:**

## ಪಡುಮಲೆಯಲ್ಲಿ

ಬಹುಕಾಲದ ಹಿಂದೆ ತುಳು-ರಾಜ್ಯದ ಒಂದೊಂದು ಭಾಗವನ್ನು ಒಂದೊಂದು ಮನೆತನದ ಅರಸರು ಆಳುತ್ತಿದ್ದರು. ಆ ರಾಜ್ಯದ ಒಂದು ಪ್ರಾಂತಕ್ಕೆ ಬಂಗರು ಮನೆಯವರು ಅರಸರಾಗಿದ್ದರು; ಒಂದು ಸೀಮೆಗೆ ಚೌಟರು ದೊರೆಗಳಾಗಿದ್ದರು. ಒಂದು ಭಾಗದಲ್ಲಿ ಅಚಲ ಮನೆತನದವರು ಬಲಿಷ್ಠರಾಗಿದ್ದರು. ಈಗ ಹಳ್ಳಿ ಹಳ್ಳಿಗಳಲ್ಲಿ ಪಟೇಲರು ಇರುವ ಹಾಗೆ ಆ ಕಾಲದಲ್ಲಿ ಗ್ರಾಮಕ್ಕೊಬ್ಬ ಗುರಿಕಾರನಿದ್ದನು. ಇಂಥ ನಾಲ್ಕಾರು ಮಂದಿ ಗ್ರಾಮ ಗುರಿಕಾರರ ಮೇಲೆ ಮತ್ತೊಬ್ಬ ಅಧಿಕಾರಿ ಇದ್ದನು; ಇವನಿಗೆ ಬಲ್ಲಾಳ ಎಂದು ಹೆಸರು. ಬಂಗರು, ಚೌಟರು, ಅಚಲರು, ಸಾವಂತರು ಮೊದಲಾದವರ ಕೈಕೆಳಗೆ ಅನೇಕ ಮಂದಿ ಬಲ್ಲಾಳರಿದ್ದರು. ಇಂಥ ಒಬ್ಬ ಬಲ್ಲಾಳನು ಈಗಿನ ದಕ್ಷಿಣ ಕನ್ನಡ ಜಿಲ್ಲೆಯ ಪುತ್ತೂರು ತಾಲ್ಲೂಕಿನ ಪಡುಮಲೆ ಎಂಬಲ್ಲಿ ಇದ್ದನು: ಮತ್ತೊಬ್ಬನು ಪಂಜದಲ್ಲಿ ಇದ್ದನು. ಮೂರನೆಯವನು ಎಣ್ಮೂರಿನಲ್ಲಿ ಇದ್ದನು.

ಒಂದಾನೊಂದು ದಿನ ಪಡುಮಲೆಯ ಪೆರುಮಾಳು ಬಲ್ಲಾಳನು ಬೇಟೆಯಾಡುವುದಕ್ಕೆ ತನ್ನ ಸಂಗಾತಿಯವರೊಡನೆ ಹೊರಟು, ಸಮೀಪದ ಅಡವಿಯಲ್ಲಿ ನುಗ್ಗಿ ಒಂದು ಕಾಡುಹಂದಿಯನ್ನು ಅಟ್ಟಿಕೊಂಡು ಹೋಗುತ್ತಿದ್ದಾಗ ದಾರಿಯ ಮೇಲೆ ಇದ್ದ ಮೊನೆಯಾದ ಕಾಸರ್ಕನ ಮುಳ್ಳೊಂದು ಅವನ ಅಂಗಾಲಿಗೆ ಚುಚ್ಚಿ, ತಲೆಗೆ ಕೆಟ್ಟ ನೋವು ಏರಿ, ಅವನು ಅಲ್ಲಿಯೇ ಬಿದ್ದುಬಿಟ್ಟನು.

"ಎಲಾ, ನನ್ನನ್ನು ಏನು ನೋಡುತ್ತೀರಿ? ಇಲ್ಲಿಯೇ ಹತ್ತಿರ ಬೂದಿ ಬೊಮ್ಮಯ್ಯ ಎಂಬುವ..." ಎಂಬೀ ಮಾತುಗಳು ಬಲ್ಲಾಳನ ಬಾಯಿಂದ ಬಿದ್ದವೋ ಇಲ್ಲವೋ ಎನ್ನುವಷ್ಟರಲ್ಲಿ ಅವನಿಗೆ ಕಣ್ಣುಕತ್ತಲೆ ಬಂದು, ಅವನು ಅಲ್ಲಿಯೇ ಒರಗಿದನು. ಆಗ ಅವನ ಆಳುಗಳು ಮಲೆಗೆ ಇಳಿದು, ಗಳ ಕಡೆದು, ಚಟ್ಟೆಕಟ್ಟಿ ಅದರ ಮೇಲೆ ಬಲ್ಲಾಳನನ್ನು ಮೆಲ್ಲಗೆ ಮಲಗಿಸಿ, ಬೂದಿ ಬೊಮ್ಮಯ್ಯನ ಚಾವಡಿಗೆ ಹೊತ್ತುಕೊಂಡು ಹೋಗಿ ಇಳಿಸಿದರು.

ಇಷ್ಟರಲ್ಲಿ ಪೆರುಮಾಳು ಬಲ್ಲಾಳನಿಗೆ ಮುಳ್ಳು ತಗಲಿದ ಸುದ್ದಿ ಮಲೆಯಲ್ಲೆಲ್ಲಾ ಹಬ್ಬಿತು. ಮುಳ್ಳು ಕೀಳುವವರು ಬೇಗನೆ ಬಂದು ನೋಡಿದ್ದಾಯಿತು; ಮಂತ್ರ ಹಾಕುವವರು ಹಾಕಿದ್ದಾಯಿತು; ಮದ್ದು ಕೊಡುವವರು ಕೊಟ್ಟದ್ದಾಯಿತು; ಬೊಮ್ಮಯ್ಯ ಬಲ್ಲಾಳನ ಬಲಿಯಾಯಿತು; ಅಮ್ಮಣ್ಣ ಬೈದ್ಯನ ಮದ್ದಾಯಿತು. ಆದರೆ ತಾನೆ ಏನು? ಬಲ್ಲಾಳನಿಗೆ ದಿನದಿನಕ್ಕೆ ಉರಿನೋವು, ಬೀಗು ಬಾವು, ಕೆಂಪು ಕೀವು ಹೆಚ್ಚುತ್ತಾ ಹೋಯಿತು. ಅನ್ನದಲ್ಲಿ ರುಚಿಯಿಲ್ಲ. ಹಾಸಿಗೆಯಲ್ಲಿ ಸುಖವಿಲ್ಲ; ಅವನು ಮನದ ಗೆಲುವಾಗಲೀ ಇರುಳ ನಿದ್ದೆಯಾಗಲೀ ಯಾವುದೊಂದೂ ಇಲ್ಲದೆ ನೋವಿನಿಂದ ನರಳಿ, ಕಡ್ಡಿಯಂತೆ ಕಂಗಾಲಾದನು. ಮಾಗಣೆಯ ಜನರೆಲ್ಲಾ ಪಡುಮಲೆಯ ಬೀದಿಗೆ ಹೋಗಿ, ಬಲ್ಲಾಳನ ಸ್ಥಿತಿಯನ್ನು ಕಂಡು, ಕಣ್ಣೀರು ತುಂಬಿ ಹಿಂದೆರಳುತ್ತಿದ್ದರು. ಹೀಗೆ ಅವನನ್ನು ನೋಡಬಂದವರಲ್ಲಿ ಒಬ್ಬನು ಒಂದು ದಿನ “ಇಂಥ ಮುಳ್ಳು ಹುಣ್ಣಿಗೆ ನಮ್ಮ ಸಾಯಿನ ಬೈದ್ಯನು ಮುಂಚೆ ಮದ್ದು ಮಾಡುತ್ತಿದ್ದನು. ಈಗ ಅವನಿಗೆ ಚಾಳೀಸು, ಕಣ್ಣುಕಾಣದು. ಆದರೆ ಅವನ ತಂಗಿ ದೇಯಿಗೂ ಆ ಮದ್ದು ಗೊತ್ತಿದೆಯಂತೆ” ಎಂದು ಮೆಲ್ಲನೆ ಹೇಳಿದನು.

ಅದಕ್ಕೆ ಮತ್ತೊಬ್ಬನು “ಅದು ಹೌದು. ದೇಯಿಯ ಮದ್ದು ಒಳ್ಳೆಯದು. ಆದರೆ ಅವಳು ಈಗ ಬರುವುದು ಹೇಗೊ? ತುಂಬಿದ ಬಸುರಿ” ಎಂದು ಸಂಶಯಪಟ್ಟನು. “ಗಂಡ ಕಾಂತಣ್ಣ ಬೈದ್ಯನು ಸತ್ತು ಇನ್ನೂ ಮೂರು ತಿಂಗಳಾಗಲಿಲ್ಲ” ಎಂದು ಇನ್ನೊಬ್ಬನು ಹೇಳಿದನು.

ದೇಯಿ ಬೈದಿತಿಯು ಮದ್ದು ಬಲ್ಲಳು ಎಂಬೀ ಮಾತು ಬಲ್ಲಾಳನ ಕಿವಿಗೆ ಬೀಳಲು ಅವನು “ನನ್ನ ದಂಡಿಗೆಯಲ್ಲಿ ಅವಳನ್ನು ಕರೆದುಕೊಂಡು ಬನ್ನಿ” ಎಂದು ಬೋವಿಗಳಿಗೆ ಅಪ್ಪಣೆ ಮಾಡಿದನು. ಆಳುಗಳು ಕೂಡಲೇ ಹೊರಟರು. ಪೆರುಮಾಳು ಬಲ್ಲಾಳನ ಬೋವಿಗಳು ತನ್ನ ಮನೆಯ ಬಾಗಿಲಿಗೆ ಸಿಂಗರಿಸಿ ತಂದಿದ್ದ ದಂಡಿಗೆಯನ್ನು ಕಂಡು ದೇಯಿ ಬೈದಿತಿಯು- “ಆಹಾ, ಅವಶ್ಯವಿಲ್ಲದ ಭವಿಷ್ಯ ಬಂತಲ್ಲಾ!” ಎಂದು ಮನಸ್ಸಿನಲ್ಲಿ ಮಾಡಿಕೊಂಡು. ಉಟ್ಟ ಉಡಿಗೆಯಲ್ಲಿಯೇ ಏಳ್ಮಲೆಗೆ ಹೋಗಿ ಏಳು ಹಿಡಿ ಸೊಪ್ಪು ಕೊಯ್ದಳು; ಮೂರ್ಮಲೆಗೆ ಹೋಗಿ ಮೂರು ಹಿಡಿ ಮದ್ದು ತಂದಳು; ಮನೆಗೆ ಬಂದು, ಅಟ್ಟ ಹತ್ತಿ, ತೆಂಗಿನ ಕಾಯಿ ತಂದು. ಮೀಸಲು ಕಟ್ಟಿಟ್ಟಳು. ಆಮೇಲೆ ಅವಳು ಆ ಮದ್ದನ್ನೂ ಕಾಯಿಯನ್ನೂ ದಂಡಿಗೆಯಲ್ಲಿರಿಸಿ ಹೊರಟಳು. ಬೋವಿಗಳು ದಂಡಿಗೆಯನ್ನು ಹೊತ್ತುಕೊಂಡು ಬಂದರು.

ಇತ್ತ ಬಲ್ಲಾಳನು "ದೇಯಿ ಬಂದಳೋ? ಬರುತ್ತಾಳೋ? ಬರುವಳೋ?" ಎಂದು ಪದೇ ಪದೇ ಕೇಳುತ್ತ ಅವಳ ಬರವನ್ನೇ ಎದುರು ನೋಡುತ್ತಿದ್ದನು. ಅಷ್ಟರಲ್ಲಿ ದೇಯಿಯು ದಂಡಿಗೆಯಿಂದ ಇಳಿದು. ನಾಚಿಕೊಂಡು ಹೇಚಿಕೊಂಡು ಬಂದು, ಬಲ್ಲಾಳನ ಹಾಸಿಗೆಯ ಮಗ್ಗುಲಲ್ಲಿ ಕುಳಿತುಕೊಂಡಳು.

ಬಲ್ಲಾಳನು ದೇಯಿಯ ಮೋರೆಯನ್ನು ದೃಷ್ಟಿಸುತ್ತ, "ಬೈದಿತಿ, ನನ್ನ ಒಂದು ಜೀವವನ್ನು ಉಳಿಸಿಕೊಡವ್ವಾ. ಹಿಂದೆ ನನ್ನ ತಾಯಿಯ ಬಸುರಿಂದ ನಾನು ಬಂದೆ. ಇಂದು ನಿನ್ನ ಬಸುರಿಂದ ಬಂದವನು ಎನ್ನಿಸಿ ಬಿಡವ್ವಾ. ನಿನಗೆ ಯಾರೂ ಮಾಡದಿದ್ದ ಮಾನ ಮಾಡುವೆ; ಕೊಡದಿದ್ದ ಉಡುಗೊರೆ ಕೊಡುವೆ" ಎಂದು ಅಂಗಲಾಚಿ ಬೇಡಿಕೊಂಡನು.

ದೇಯಿ ಬೈದಿತಿಯು ಕೂಡಲೇ ಎದ್ದು ತಾನು ತಂದಿದ್ದ ಔಷಧದ ಪೊಟ್ಟಳವನ್ನು ಬಿಚ್ಚಿ, ಅಮ್ಮಣ್ಣನು ಮೊದಲು ಹಚ್ಚಿದ್ದ ಮದ್ದನ್ನು ತೊಳೆದು ತೆಗೆದಳು; ಅನಂತರ ತನ್ನ ಮದ್ದನ್ನು ಅರೆದು ಪೂಸಿದಳು; ಮಂತ್ರದಿಂದ ಮಾಣಿಸಿದಳು. ಸೊಪ್ಪಿನಿಂದ ತಣಿಸಿದಳು.

ಹೀಗೆ ಮಾಡಲಾಗಿ - ಬಲ್ಲಾಳನಿಗೆ ಗಳಿಗೆಯಿಂದ ಗಳಿಗೆಗೆ, ದಿನದಿಂದ ದಿನಕ್ಕೆ- ಎದೆಯಲ್ಲಿ ಇದ್ದದ್ದು ನಡುವಿಗೆ ಬಂತು; ನಡುವಿನಿಂದ ಕಾಲಿಗೆ ಇಳಿಯಿತು; ಕಾಲಿನಲ್ಲಿ ಇದ್ದದ್ದು ಅಂಗಾಲಲ್ಲಿ ತೋರಿ ಭೂಮಿಗೆ ಬಿತ್ತು. ಹೋದರುಚಿ. ನಿಂತ ಹಸಿವೆ, ಬಾರದ ನಿದ್ದೆ - ಇವೆಲ್ಲಾ ತಿರುಗಿ ಬಂದವು. ಬಲ್ಲಾಳನು ಮೊದಲಿನ ಬಲ್ಲಾಳನಾದನು. ಅಂದಿನಿಂದ ಬಲ್ಲಾಳನಿಗೂ ಬೀಡಿನವರಿಗೂ ದೇಯಿ ಬೈದಿತಿಯಲ್ಲಿ ಗೌರವವು ಹೆಚ್ಚಾಯಿತು. ಅದನ್ನು ಕಂಡು ಕೆಲವರಿಗೆ ಹೊಟ್ಟೆ ಉರಿಯಿತು. ಹೀಗೆ ಹೊಟ್ಟೆಕಿಚ್ಚು ಪಟ್ಟವರಲ್ಲಿ ಬಲ್ಲಾಳನಿಗೆ ಮಂತ್ರಿಯಾಗಿದ್ದ ಮಲ್ಲಯ ಬುದ್ಧಿವಂತ ಎಂಬುವನು ಒಬ್ಬನಾಗಿದ್ದನು.

ಇತ್ತ ಬಲ್ಲಾಳನಿಗೆ. ಮೊದಲಿಗಿಂತ ಚೆನ್ನಾಗಿ ಮೈಬೆಳೆದದ್ದನ್ನು ಕಂಡು ಒಂದುದಿನ ದೇಯಿ ಬೈದಿತಿಯು "ಬಲ್ಲಾಳರೇ, ನಾನು ಮನೆಗೆ ಹೊರಡಬೇಕೆಂದ್ದಿದ್ದೇನೆ. ನನಗೆ ಏನಾದರೂ ಕೊಡುವುದು ಇದ್ದರೆ, ಅದಕ್ಕೆ ಅಪ್ಪಣೆಯಾಗಲಿ" ಎಂದು ಕೈಮುಗಿದು ಬಿನ್ನಯಿಸಿದಳು.

“ನೀನು ಹೋಗತಕ್ಕದ್ದೇ. ಆದರೆ ಉಡುಗೊರೆ ಕೊಡಲಿಕ್ಕೆ ನಮ್ಮ ಮಲ್ಲಯ ಬುದ್ಧಿವಂತನು ಈಗ ಇಲ್ಲಿ ಇಲ್ಲವಷ್ಟೆ. ಅವನ ಕೂಡೆ ಒಂದು ಮಾತು ಕೇಳಬೇಕು” ಎಂದು ಪರಮಾಳು ಬಲ್ಲಾಳನು ಹುಬ್ಬೆತ್ತಿ ಹೇಳಿದನು.

“ಹಾಗೋ? ಅಳಿದ ಜೀವ ಉಳಿಸಿ ಕೊಡಲು ಆಗ ಇಲ್ಲದವರು ಈಗ ಮಾತ್ರ ಬೇಕೋ?” ಎಂದು ದೇಯಿಯು ಮರುಮಾತು ಕೊಟ್ಟು, ಬೀಡಿನ ಚಾವಡಿಯಿಂದ ಎದ್ದಳು.

ಅಷ್ಟರಲ್ಲಿ ಬೀಡಿನ ಯಜಮಾನಿ ಹೆಂಗಸು “ಜೀವದಾನ ಮಾಡಿದ್ದಕ್ಕೆ ಯಾವ ಮಾನ ಮಾಡಿದರು? ಆಹಾ!” ಎಂದು ತನ್ನೊಳಗೆ ತಾನೇ ಮಾತಾಡಿಕೊಂಡದ್ದನ್ನು ಬಲ್ಲಾಳನು ಕೇಳಿ, ಚಾವಡಿಗೆ ಬೆನ್ನು ತಿರುಗಿಸಿ ಹೋಗುತ್ತಿದ್ದ ಆ ದೇಯಿಯನ್ನು ಮತ್ತೆ ಕರೆಯಿಸಿ, “ಇಕೋ, ಈ ತಳಿಗೆಯನ್ನು ಹಿಡಿದುಕೋ” ಎಂದು ಹೇಳಿ, ವೀಳ್ಯದ ಹರಿವಾಣವನ್ನು ಅವಳ ಕೈಯಲ್ಲಿ ಕೊಟ್ಟು “ಅವ್ವಾ, ಈ ಎಣ್ಣೆ ಓಲೆ, ಎಸಳು ಬುಗುಡಿ, ಮುಳ್ಳಿನ ಕೊಪ್ಪು, ಪಚ್ಚೆಯ ಮೂಗುತಿ, ಇವೆಲ್ಲ ನಿನಗೆ; ಇನ್ನು ಕೊಡಲಿಕ್ಕೆ ಇರುವುದನ್ನು ನಿನ್ನ ಮುಂದಿನ ಮಕ್ಕಳಿಗೆ ಕೊಡುತ್ತೇನೆ” ಎಂದು ಸಂತಯಿಸಿದನು.

“ನನ್ನ ಮಗಳು ಕಿನ್ನಿದಾರು ಇದ್ದಾಳೆ. ಅವಳಿಗೆ?” ಎಂದು ಬೈದಿತಿಯು ಕೇಳಿದಳು. “ಅವಳು ನಿಮ್ಮ ಮನೆಯಲ್ಲಿ ಇದ್ದಾಳೋ?” ಎಂದು ಬಲ್ಲಾಳನು ಪ್ರಶ್ನೆ ಮಾಡಿದನು.

ಬೈದಿತಿಯು “ಅವಳಿಗೆ ಏಳು ವರ್ಷ ವಯಸ್ಸು ಎಂದಾಗ ಪಂಜದಲ್ಲಿನ ಪಯ್ಯ ಬೈದ್ಯನಿಗೆ ಕೈಹಿಡಿಸಿ ಕೊಟ್ಟುಬಿಟ್ಟೆದ್ದೇವೆ. ಈ ವರ್ಷದ ಆಯನಕ್ಕೆ ಇಲ್ಲಿಗೆ ತರಿಸಿಕೊಳ್ಳಬೇಕೆಂದಿದ್ದೇನೆ” ಎಂದಳು.

ಅದಕ್ಕೆ ಬಲ್ಲಾಳನು “ಈ ಪಟ್ಟೆಯ ಸೀರೆ, ಈ ಕುತ್ತಣಿಯ ರವಕೆ, ಈ ಚಿನ್ನದ ಬಳೆ ಅವಳಿಗೆ” ಎಂದು ಹೇಳಿ ಕೆಲವು ಒಡವೆ ವಸ್ತುಗಳನ್ನು ಕೊಟ್ಟು, ದೇಯಿ ಬೈದಿತಿಯನ್ನು ಕಳುಹಿಸಿದನು.

ಬೀಡಿನ ಚಾವಡಿಯಿಂದ ಇಳಿದು ಬಂದ ದೇಯಿಗೆ ಕಂಬಳದ ಗದ್ದೆಯ ಹತ್ತಿರ ಬರುವಷ್ಟರಲ್ಲಿ ಹೆರಿಗೆ ಬೇನೆಯು ತೋರಿತು. ಅವಳು ಗದ್ದೆಯ ತೆವರಿಯ ಮೇಲಿನ ಒಂದು ಕೆಂದಾಳೆ ತೆಂಗಿನಮರಕ್ಕೆ ಒರಗಿಕೊಂಡು, ವ್ಯಥೆಯಿಂದ ನಿಂತುಬಿಟ್ಟಳು. ಅಷ್ಟರಲ್ಲಿ ಹಿಂದೆ ಹೇಳಿದ ಆ

ಮಲ್ಲಯ ಬುದ್ಧಿವಂತನು ಬೀಡಿಗಾಗಿ ಅದೇ ದಾರಿಯಲ್ಲಿ ಬರುತ್ತಿದ್ದು, ಹಾದಿಗೆ ಅಡ್ಡಲಾಗಿ ಕದಲದೆ ನಿಂತಿದ್ದ ದೇಯಿಯನ್ನು ಕಂಡು, "ಅಬ್ಬ ಬಿಲ್ಲರ ಹೆಣ್ಣೋ? ರಕ್ತದ ಕೊಬ್ಬೋ? ದುಡ್ಡಿನ ಸೊಕ್ಕೋ?" ಎಂದು ಬಿರುಸಾಗಿ ಬಾಯಿ ಮಾಡಿದರು. ದೇಯಿಯು ಉಸ್ಸೆಂದು ಉಸಿರುಬಿಟ್ಟು, "ನಾನು ಸೊಕ್ಕಿನಿಂದ ನಿಂತದ್ದೇ ಆದರೆ, ನಾನು ಮಾಡಿದ್ದನ್ನು ನಾನೇ ಉಣ್ಣುವೆ. ನಾನು ಸಂಕಟದಿಂದ ನಿಂತದ್ದು ಹೌದಾದರೆ, ನನ್ನ ಮಕ್ಕಳು ನೋಡಿಯಾರು" ಎಂದು ಮೆಲ್ಲನೆ ಉತ್ತರ ಕೊಟ್ಟಳು.

ಇಷ್ಟರೊಳಗೆ ಬೈದಿತಿಯ ಬೇನೆಯ ಸುದ್ದಿಯು ಬೀಡಿಗೆ ಮುಟ್ಟಿತು. ಪೆರುಮಾಳು ಬಲ್ಲಾಳನು ದೇಯಿಯನ್ನು ಬರಮಾಡಿಕೊಂಡು ಅವಳ ಹೆರಿಗೆಗಾಗಿ ಎಲ್ಲವನ್ನು ಏರ್ಪಡಿಸಿದನು. ದೇಯಿಯು ಬೀಡಿನ ಒಂದು ಅರೆಯಲ್ಲಿ ಅವಳಿಜವಳಿ ಗಂಡುಮಕ್ಕಳನ್ನು ಹೆತ್ತಳು. ಪುರುಡಿನ ದಿವಸಗಳು ಕಳೆದನಂತರ ಮಕ್ಕಳಿಗೆ ನಾಮಕರಣವಾಯಿತು. "ದಕ್ಷಿಣ ಕೋಟೇಶ್ವರ ದೇವರ ಬದಿಕಲ್ಲು ಬಾಳುವಂತೆ ಬಾಳು" ಎಂದು ಹರಸಿ ಹಿರಿಯ ಮಗುವಿಗೆ ಕೋಟಿ ಎಂತಲೂ, "ಉತ್ತರ "ಚೆನ್ನಿಗ ದೇವರ ಬದಿಕಲ್ಲು ಬಾಳುವಂತೆ ಬಾಳು" ಎಂದು ಹರಸಿ ಕಿರಿಯ ಮಗುವಿಗೆ ಚೆನ್ನಯ ಎಂತಲೂ ಇಬ್ಬರಿಗೂ ಹೆಸರಿಟ್ಟರು.

ಮಕ್ಕಳಿಗೆ ನಾಮಕರಣವಾದ ತರುವಾಯ ದೇಯಿ ಬೈದಿತಿಯು ಬಹಳ ಕಾಲ ಬದುಕಲಿಲ್ಲ. ಅವಳು ಸಹಜವಾಗಿ ಕಾಲವಾದಳೊ, ಇಲ್ಲವೆ ಅಮ್ಮಣ್ಣ ಬೈದ್ಯನೂ, ಮಲ್ಲಯ ಬುದ್ಧಿವಂತನೂ ಕೂಡಿ ಮಾಡಿಸಿದರೆಂಬುದಾಗಿ ಹೇಳುವ ಮಾಟದಿಂದ ಸತ್ತು ಹೋದಳೋ ಎಂಬುದು ಈ ತನಕ ತಿಳಿದಿಲ್ಲ. ಆದರೆ ಆ ಪಡುಮಲೆ ಬಲ್ಲಾಳನು ಮಾತ್ರ ಆ ತಾಯಿ ತಂದೆಗಳಿಲ್ಲದ ಮಕ್ಕಳನ್ನು ತೊರೆಯಲಿಲ್ಲ. ಆತನು ಅವರ ದೂರದ ಸೋದರ ಮಾವನಾದ ಸಾಯಿನ ಬೈದ್ಯನೆಂಬ ಬಿಲ್ಲವನನ್ನು ಕರೆಯಿಸಿ, ಆ ಅನಾಥ ಮಕ್ಕಳನ್ನು ಅವನ ಸೆರಗಿನಲ್ಲಿ ಹಾಕಿ, ಮಕ್ಕಳ ಸಾಕಣೆಗಾಗಿ ಬಿಂದಿಗೆ ತುಂಬ ಹಾಲು, ಹಾಲಿಗಾಗಿ ಹಸು, ಹಸು ಬತ್ತಿದರೆ ಎಮ್ಮೆ, ಮಕ್ಕಳಿಗೆ ಮಲಗಲಿಕ್ಕೆ ಮಂದರಿ, ಮಂದರಿ ಹರಿದರೆ ಹಚ್ಚಡ, ಹಚ್ಚಡ ಹರಿದರೆ ಮಂದರಿ ಕೊಡಿಸಿ, ಅವನನ್ನು ಕಳುಹಿಸಿದನು. ಸಾಯಿನ ಬೈದ್ಯನ ಮನೆಯಲ್ಲಿ ಕೋಟಿಚೆನ್ನಯರು ಸಾಯಿನ ಬೈದಿತಿಯ ಆರೈಕೆಯಿಂದ ಬೆಳೆದು ದೊಡ್ಡವರಾದರು.

ಪಡುಮಲೆಯಲ್ಲಿ ಒಂದು ವಿಸ್ತಾರವಾದ ಆಟದ ಬೈಲು ಇದೆ. ಹಳ್ಳಿಯ ಮಕ್ಕಳು ಸಂಜೆಯಲ್ಲಿ ಚೆಂಡಾಟವನ್ನೋ, ಬಿಲ್ಲಾಟವನ್ನೊ ಆ ಬೈಲಿನಲ್ಲಿ ಆಡುತ್ತಿದ್ದರು. ಬಡವರು ಮತ್ತು ಬಲ್ಲಿದರು. ಬೈದ್ಯರು ಮತ್ತು ಒಕ್ಕಲಿಗರು ಎಂಬ ಯಾವ ಭೇದವೂ ಇಲ್ಲದೆ ಎಲ್ಲರೂ ಕೂಡಿ ಆಟವಾಡುತ್ತಿದ್ದರು. ಆಟದಲ್ಲಿ ಮಾತಿಗೆ ಮಾತು ಬರುತ್ತದಷ್ಟೆ. ಹೀಗೆ ಒಂದು ದಿನ ಆಡುವಾಗ, ಮಾತಿಗೆ ಮಾತು ಬಂದು ಅಂದಿನ ಆಟವೆಲ್ಲ ಜಗಳದಲ್ಲಿ ಮುಗಿಯಿತು. ಬಿಲ್ಲವರ ಮಕ್ಕಳು ಆ ದಿವಸ ಗೆದ್ದಿದ್ದರು; ಒಕ್ಕಲಿಗರ ಮಕ್ಕಳು ಸೋತಿದ್ದರು. ಸೋತವರು ಜಗಳಕ್ಕೆ ನೆಪವನ್ನು ತೆಗೆದರು. "ಕಳದ ಬಾಡಿಗೆ ಕೊಡಬೇಕು" ಎಂದು ಬುದ್ಧಿವಂತನ ಮಕ್ಕಳೂ, "ಕಳದ ಬಾಡಿಗೆ ಇದೆ ಎಂದು ಆಟದ ಮೊದಲು ಕಟ್ಟು ಮಾಡಿಲ್ಲ" ಎಂದು ಚೆನ್ನಯನೂ ಕಚ್ಚಾಡಿ, ಕಚ್ಚಾಡಿ ತಮ್ಮ ತಮ್ಮ ಮನೆಗಳಿಗೆ ಹೊರಟು ಹೋದರು. ಚೆಂಡು ಮಾತ್ರ ಬೈದಿತಿಯ ಮಕ್ಕಳ ಕೈಯಲ್ಲಿ ಉಳಿಯಿತು. ಬುದ್ಧಿವಂತನ ಮಕ್ಕಳು ಬರಿಯ ಕೈಯಲ್ಲಿ ಮನೆಗೆ ಹೋದರು.

ಮನೆಗೆ ಬಂದ ಮಕ್ಕಳ ಮೋರೆಯನ್ನು ಕಂಡು, ಅವರ ದೂರು ಕೇಳಿ, ಮಲ್ಲಯ ಬುದ್ಧಿವಂತನು ಕೋಟಿಚೆನ್ನಯರನ್ನು ಹುಡುಕ ಹೋದನು. ದಾರಿಯಲ್ಲಿ ಅವರಿಬ್ಬರು ಚೆಂಡಾಡುತ್ತಾ, ತನ್ನ ಎದುರಿಗೆ ಬಂದದ್ದನ್ನು ಕಂಡು ಬುದ್ಧಿವಂತನು ಅವರ ಕೈಗೆ ಹೊಡೆದು, ಚೆಂಡನ್ನು ಕಸಿದುಕೊಂಡು ಹಿಂದೆರಳಿದನು. ಕೋಟಿ ಚೆನ್ನಯರು ಕೈಯೆತ್ತಲಿಲ್ಲ.

"ಅಯ್ಯಾ, ಚೆಂಡನ್ನು ಚೆನ್ನಾಗಿ ಕಟ್ಟಿಡಿ. ನಮ್ಮ ಸಣ್ಣ ಕೈಗಳಿಂದ ನೀವು ಕಿತ್ತ ಚೆಂಡನ್ನು ದೊಡ್ಡ ಕೈಗಳಿಂದ ಸೆಳೆದು ತಂದೇವು, ಮರೆಯಬೇಡಿ" ಎಂದು ಹೇಳಿ ಇಬ್ಬರು ಹುಡುಗರೂ ಮನೆಯ ದಾರಿ ಹಿಡಿದರು.

ಅಲ್ಲಿಂದ ಇತ್ತ ಬುದ್ಧಿವಂತನ ಮನೆಯವರಿಗೂ ಬಿಲ್ಲವರ ಮನೆಯವರಿಗೂ ಮನಸ್ಸು ಸರಿಯಿಲ್ಲದೆ ಜಗಳಗಳು ಹುಟ್ಟಿ, ಆಗಾಗ ಬಲ್ಲಾಳನ ಬೀಡಿಗೆ ದೂರು ಹೋಗುತ್ತಿತ್ತು. ಈ ಮನೆಯ ಕೋಳಿಯ ಮರಿ ಅವರ ಅಂಗಳದ ಅಡ್ಡ ಹಾರಿತೆಂದು ಜಗಳ, ಆ ಮನೆಯ ದನದ ಕರು ಇವರ ಗದ್ದೆಯ ಪಕ್ಕದಲ್ಲಿತ್ತೆಂದು ಜಗಳ, ಇಂಥ ವ್ಯಾಜ್ಯಗಳನ್ನು ಪದೇಪದೇ ತೀರಿಸುವ ಬದಲಾಗಿ ಇವರಿಬ್ಬರನ್ನು ಬೇರ್ಪಡಿಸುವುದೇ ಮೇಲೆಂದು ಪೆರುಮಾಳ ಬಲ್ಲಾಳನು ನಿಶ್ಚಯಿಸಿ, "ನೀವು ಇಬ್ಬರು ಒಂದೇ ಬೈಲಿನಲ್ಲಿ ಒಂದೇ ನೆರೆಯಲ್ಲಿ ಇದ್ದರೆ, ನಿಮ್ಮ ತೊಂಡು ತೊಳಸು ಎಂದಿಗೂ ತಪ್ಪದು.

ಭೂಮಿಯನ್ನು ಪಾಲು ಮಾಡಿ ಕೊಡುತ್ತೇನೆ. ಆಸ್ತಿಯಲ್ಲಿ ಕೆಳಗಿನ ಕಂಬುಳದ ಗದ್ದೆಯು ಬುದ್ಧಿವಂತನಿಗೆ, ಮೇಲಿನ ಕಂಬುಳವು ಬಿಲ್ಲವರಿಗೆ" ಎಂದು ತೀರ್ಮಾನ ಮಾಡಿ, ಗಡಿ ಬಿಡಿಸಿಕೊಟ್ಟು, "ಕಂಬುಳವನ್ನು ಗೋರುವಾಗ ಬಿಲ್ಲವರು ಬುದ್ಧಿವಂತನಿಗೆ ಒಂದು ಕಾಣಿಕೆ ಕೊಡಬೇಕು" ಎಂದು ಕಟ್ಟು ಮಾಡಿದನು. ಈ ರೀತಿಯಾಗಿ ಗದ್ದೆಗಳನ್ನು ವಿಂಗಡಿಸಿಕೊಟ್ಟು ತರುವಾಯ ಕೋಟಿ ಚೆನ್ನಯರು ಅನಿಲಜೆ ಎಂಬ ಬೈಲನ್ನು ಬಿಟ್ಟು ಏರಜೆ ಎಂಬಲ್ಲಿಗೆ ಹೋಗಿ, ಅಲ್ಲಿ ಉಳುಕೊಂಡಿದ್ದರು.

ಕೋಟಿ ಚೆನ್ನಯರು ದೂರವಾದರೂ ಮಲ್ಲಯ ಬುದ್ಧಿವಂತನ ಮನಸ್ಸಿನಲ್ಲಿದ್ದ ಕಿಚ್ಚು ಮಾತ್ರ ಆರಲಿಲ್ಲ. ಒಳಗೊಳಗೇ ಬೇಯುತ್ತಲಿದ್ದ ಆ ಹಗೆಯು ಒಂದು ದಿನ ಕುದಿಬಂದು ಹೊರಗೆ ಹರಿಯಿತು.

ವರ್ಷ ವರ್ಷವು ಬರುವ ಅನಿಲಜೆ ಬೈಲಿನ ಕಂಬುಳದ ಉತ್ಸವವು ಸಮೀಪಿಸಿತು. ಬುದ್ಧಿವಂತನು ಕಂಬುಳದ ಉತ್ಸವಕ್ಕೆ ಮುಹೂರ್ತ ಕೇಳಿಕೊಳ್ಳುವುದಕ್ಕಾಗಿ ತನ್ನ ಮನೆಯಿಂದ ಹೊರಟು, ಊರ ಜೋಯಿಸನಿದ್ದಲ್ಲಿಗೆ ಹೋಗುತ್ತಿದ್ದನು. ಜೋಯಿಸನ ಮನೆಗೆ ಹೋಗಲು ಏರಜೆ ಬೈಲು ದಾಟಿ ಹೋಗಬೇಕಾಗಿತ್ತು. ಬುದ್ಧಿವಂತನು ಹೋಗುವುದನ್ನು ಕಂಡು, ಕೋಟಿಯ ತಮ್ಮ ಮನೆಯಿಂದ ಹೊರಕ್ಕೆ ಬಂದು -"ಅಯ್ಯಾ, ನಮ್ಮ ಕಂಬುಳಕ್ಕೂ ಮುಹೂರ್ತ ಕೇಳಿ ಬಿಡಿ" ಎಂದು ಹೇಳಿ, ಜೋಯಿಸನ ದೇವರಿಗೆ ಕಾಣಿಕೆಗಾಗಿ ತೆಂಗಿನ ಕಾಯನ್ನು ಕೊಟ್ಟನು. ಮಲ್ಲಯನು ಹೂಗುಟ್ಟಿ ಮುಂದರಿಸಿ, ಅವನ ತಲೆಯು ಕಣ್ಣಿಗೆ ಮರೆಯಾದ ಕೂಡಲೇ ಆ ಹರಕೆಯ ತೆಂಗಿನ ಕಾಯಿಯನ್ನು ದಾರಿಕಲ್ಲಿಗೆ ಒಡೆದು, ನೀರು ಕುಡಿದು, ಕೊಬ್ಬರಿ ತಿಂದು, ಜೋಯಿಸನಿದ್ದಲ್ಲಿಗೆ ಹೋದನು. ಮರಳಿ ಬರುವಾಗ "ನಮ್ಮ ಕಂಬಳಕ್ಕೆ ಈ ಮಂಗಳವಾರ ಮುಹೂರ್ತ, ನಿಮ್ಮ ಕಂಬಳಕ್ಕೆ ಮುಂದಿನ ಮಂಗಳವಾರ ಕೂಡಿ ಬರುತ್ತದಂತೆ" ಎಂದು ಸುಳ್ಳು ಸುಳ್ಳೇ ಹೇಳಿದನು. ಆದರೆ ಚೆನ್ನಯನಿಗೆ ಬುದ್ಧಿವಂತನ ಮಾತಿನಲ್ಲಿ ಸಂಶಯ ಬಾರದೆ ಹೋಗಲಿಲ್ಲ. "ಬುದ್ಧಿವಂತನ ಕಂಬುಳ ನಾಡದು ಮಂಗಳವಾರವಷ್ಟೆ, ನಮಗೂ ಅದೇ ದಿನ ಕಂಬುಳ ಆಗಬೇಕು. ಬುದ್ಧಿವಂತನು ಗೋರುವ ದಿನವೇ ನಾವೂ ಗೋರಬೇಕು. ಅವನು ಬಿತ್ತುವ ದಿನವೇ ನಾವೂ ಬಿತ್ತಬೇಕು" ಎಂದು ಅವನು ತನ್ನೊಳಗೇ ನಿಶ್ಚಯಿಸಿಕೊಂಡು, ಅಟ್ಟದಲ್ಲಿದ್ದ ಬೀಜದ ಬತ್ತವನ್ನು ತೆಗೆದು ನೀರಿನಲ್ಲಿ ನೆನೆ ಹಾಕಿ, ಮನೆಮನೆಗೆ ಹೋಗಿ "ಕಂಬುಳಕ್ಕೆ ನಾಳೆ ಆಳುಬೇಕು, ಎತ್ತು ಬೇಕು. ನಾಲ್ಕೆತ್ತು ಇದ್ದವರು ಎರಡೆತ್ತು

ನಮ್ಮ ಗದ್ದೆಗೆ ಬಿಡಬೇಕು. ಎರಡೆತ್ತು ಬುದ್ಧಿವಂತನ ಗದ್ದೆಗೆ ಹೊಡೆಯಬೇಕು. ಎರಡೆತ್ತು ಇದ್ದವರು ಮನಸ್ಸಿದ್ದರೆ ಎರಡನ್ನೂ ನಮ್ಮ ಗದ್ದೆಗೆ ಅಟ್ಟಬೇಕು. ಅಲ್ಲದಿದ್ದರೆ ಅವನ ಗದ್ದೆಗೆ ಅಟ್ಟಬೇಕು" ಎಂಬುದಾಗಿ ಸಾರಿದನು.

ಇದನ್ನು ಕೇಳಿ ಬುದ್ಧಿವಂತನು ಸ್ವಲ್ಪ ಬಿಸಿಯೇರಿ, "ನಿಮ್ಮ ಕಂಬುಳಕ್ಕು ನಾಳೆಯ ದಿನವೇ ಕೂಡಿಬಂತೇ? ಇರಲಿ, ನಮ್ಮ ಕಂಬುಳವು ನಾಳೆಯೇ ಆಗುವುದು, ಬೆಳ್ಳಿ ಮೂಡಿ ಬೆಳಕು ಹರಿಯುವಷ್ಟರಲ್ಲಿ ನಮ್ಮ ಗದ್ದೆಯಲ್ಲಿ ನಿಮ್ಮ ಎತ್ತು ಬಂದು ನಿಲ್ಲಬೇಕು" ಎಂದು ಕೆರಳಿಸಿ ಹೇಳಿ, ತನ್ನ ಮನೆಗೆ ಹಿಂತಿರುಗಿದನು.

ಇರುಳು ಕಳೆದು ಬೆಳಕು ಹರಿಯಿತು. ಕೋಟಿ ಚೆನ್ನಯರ ಗದ್ದೆಯು ಎರಡು ಸಾಲು ಉತ್ತಾಯಿತು; ಆದರು ಬುದ್ಧಿವಂತನ ಗದ್ದೆಗೆ ಎತ್ತುಗಳು ಇಳಿಯಲಿಲ್ಲ. ಗದ್ದೆಗೋರಿದ ತರುವಾಯ ಕೋಟಿಚೆನ್ನಯರು ಎರಡು ಜೋಡಿ ಎತ್ತನ್ನೂ ಎರಡು ಆಳನ್ನೂ ಬುದ್ಧಿವಂತನಿಗೆ ಕಳುಹಿಸಿದರು.

ತನ್ನ ಗದ್ದೆಗಿಂತ ಬಿಲ್ಲವರ ಕಂಬುಳವು ಮೊದಲು ಗೋರಿ ಮುಗಿದಿದ್ದನ್ನು ಕಂಡು ಬುದ್ಧಿವಂತನಿಗೆ ಕಿಡಿಕಿಡಿಯಾಯಿತು. ತನ್ನ ಗದ್ದೆಗೆ ಇಳಿದ ಅವರ ನಾಲ್ಕೆತ್ತುಗಳನ್ನು ಕಂಡು, ತಾನು ನಿಂತಿದ್ದ ಕಟ್ಟೆಯಿಂದ ಕೆಳಕ್ಕೆ ಹಾರಿ, ನೇಗಿಲಿಗೆ ಹೂಡಿದ್ದ ಎತ್ತುಗಳನ್ನು ಹೊಡೆದು, ಹೊಡೆದು ಓಡಿಸುತ್ತ ತನ್ನ ಗದ್ದೆಯನ್ನು ಗೋರತೊಡಗಿದನು.

ಹೀಗೆ ಬುದ್ಧಿವಂತನು ಸಿಟ್ಟಿನಿಂದ ಎತ್ತುಗಳನ್ನು ಬಡಿಯುವುದನ್ನು ಕಂಡು, ಕೋಟಿ ಚೆನ್ನಯರು "ಅಯ್ಯಾ, ಹೆರವರ ಎತ್ತನ್ನು ಹೊಡೆಯುವುದು ಸರಿಯಲ್ಲ. ಏಟು ಎತ್ತಿನ ಬೆನ್ನಿಗೆ, ನೋವು ಮಾತ್ರ ನಮ್ಮ ಎದೆಗೆ; ನಮ್ಮ ಮೇಲೆ ನಿಮಗೆ ಸೇಡು ಇದ್ದರೆ ಅದನ್ನು ನಮ್ಮ ಮೇಲೆ ತೀರಿಸಬೇಕೇ ಹೊರತು. ಅದನ್ನು ಬಡ ಎತ್ತಿನ ಮೇಲೆ ತೋರಿಸಬೇಕೆ?" ಎಂದು ಹಿಂಜರಿಯದೆ ಮಾತಾಡಿದರು. ಬುದ್ಧಿವಂತನ ಬಾಯಿಂದ ಉತ್ತರ ಬರಲಿಲ್ಲ; ಹೂಂಕಾರ ಮಾತ್ರ ಹೊರಟಿತು. ಆ ದಿನದ ಕಂಬುಳದ ಗೌಜಿ ಹೇಗೋ ಮುಗಿಯಿತು. ಊಟ ಮಾಡುವವರಿಗೆ ಊಟ ಕೊಟ್ಟದ್ದಾಯಿತು. ಊಟ ಮಾಡದವರಿಗೆ ಎಳನೀರು ಹಂಚಿದ್ದಾಯಿತು. ಬಂದವರನ್ನೂ ಮರ್ಯಾದೆಯಿಂದ ಕಳುಹಿಸಿದ್ದಾಯಿತು. ತರುವಾಯ ಪೂರ್ವಪದ್ಧತಿಗೆ ಸರಿಯಾಗಿ ಗದ್ದೆಯಲ್ಲಿ ಬೀಜ ಬಿತ್ತುವ

ಸಂಭ್ರಮವು ಪ್ರಾರಂಭವಾಯಿತು. ಬುದ್ಧಿವಂತನ ಗದ್ದೆಯ ಬಿತ್ತವನ್ನು ದಂಡಿಗೆಯಲ್ಲಿಯೂ, ಬಿಲ್ಲರ ಗದ್ದೆಯ ಬಿತ್ತನ್ನು ಕುಕ್ಕೆಯಲ್ಲಿಯೂ ತಂದು ಬಿತ್ತಿ ಬಾಳೆಯ ಪೊಕರೆಯನ್ನು ಹಾಕಿದರು.

ಬಿತ್ತಿದ ಗದ್ದೆಯಲ್ಲಿ ಅಗೆಯು ಅಂದವಾಗಬೇಕಾದರೆ. ಬಿತ್ತಿದ ನಾಲ್ಕಾರು ದಿನಗಳೊಳಗೆ ಮೊದಲಿನ ಕೊಳೆ ನೀರು ಕಳೆದು, ತಿಳಿನೀರು ಬಿಡುವುದು ಕೆಲವು ಕಡೆ ವಾಡಿಕೆಯಾಗಿದೆ. ಅದಕ್ಕಾಗಿ ಕೋಟೆಯ ಏರಜೆಯಿಂದ ಹೊರಟು ಅನಿಲಜೆಗೆ ಬಂದನು. ಕೋಟಿಯ ಗದ್ದೆಯು ನೀರು ತುಂಬಿ ರಾಮಸಮುದ್ರದಂತೆ ಕಾಣುತ್ತಿತ್ತು. ಬುದ್ಧಿವಂತನ ಗದ್ದೆಯಲ್ಲಿ ಚಿಟ್ಟೆ ಕುಡಿಯಲು ಕೂಡ ನೀರು ಇಲ್ಲದೆ, ಕೊಕ್ಕರೆ ಆಡುತ್ತಿತ್ತು. ಕೋಟಿಯು ನೆಟ್ಟಗೆ ಬುದ್ಧಿವಂತನ ಮನೆಗೆ ಹೋಗಿ, ತಲೆ ಹೊರೆಯನ್ನು ಕೆಳಗಿಳಿಸಿ. ಬಗ್ಗಿ ಕೈ ಮುಗಿದನು. ಬುದ್ಧಿವಂತನು ಅವನನ್ನು ನೋಡಿದರೂ ನೋಡದಂತೆ ಮಾಡಿ, ಮೋರೆ ತಿರುಗಿಸಿ ಕುಳಿತುಕೊಂಡನು. ಕೋಟಿಯೂ ತಾನು ನಮಸ್ಕಾರ ಮಾಡಿದರೂ ಕಣ್ಣೆತ್ತಿ ನೋಡದ ಬುದ್ಧಿವಂತನಿಗೆ ಕೇಳಿಸುವಂತೆ “ಅಯ್ಯಾ ನಾನು ನಾಲ್ಕು ಸಾರಿ ನಿಮಗೆ ನಮಸ್ಕಾರ ಮಾಡಿದೆ. ನೀವು ಒಂದಕ್ಕಾದರೂ ಕೈ ಆಲ್ಲಾಡಿಸಲಿಲ್ಲ. ಇರಲಿ, ಕಾಡಿನ ಕಾಸರ್ಕನ ಮರಕ್ಕೆ ಅಡ್ಡಬಿದ್ದಿದ್ದರೆ ಹಣ್ಣೆಲೆ ಉದುರುತ್ತಿತ್ತು. ಚಿಗುರೆಲೆ ನಗುತ್ತಿತ್ತು” ಎಂದು ಹೇಳಿದನು. ಆದರೂ ಮಲ್ಲಯ ಬುದ್ಧಿವಂತನು ಮೀಸೆ ತಿರುವುತ್ತ ಸುಮ್ಮನಿದ್ದನು.

ಕೋಟಿಯು “ಅಯ್ಯಾ, ನಮ್ಮ ಕಂಬುಳವನ್ನು ಬಿತ್ತಿ ಮೂರು ದಿನವಾಯಿತು. ನಮ್ಮ ಗದ್ದೆಯ ನೀರು ಬಿಡುವುದಕ್ಕೆ ಅಪ್ಪಣೆಯಾಗಬೇಕು” ಎಂದು ಹೇಳಿ ಮತ್ತೊಮ್ಮೆ ಕೈಮುಗಿದನು.

ಮೇಲಿನ ಗದ್ದೆಯಿಂದ ಬಿಟ್ಟ ನೀರು ಕೆಳಗಿನ ಗದ್ದೆಗೆ ಇಳಿದು ತೋಡಿಗೆ ಹರಿಯುವಾಗ ಕೆಳಗಿನ ಗದ್ದೆಯಲ್ಲಿದ್ದ ಬಿತ್ತವೂ ಅಗೆಯೂ ನೀರಿನೊಡನೆ ಕೊಚ್ಚಿಕೊಂಡು ಹೋಗುವುದೆಂದು ಬುದ್ಧಿವಂತನು ಅರಿತಿದ್ದರೂ ಆತನು ಕಣ್ಣಿದ್ದ ಕುರುಡನಂತೆಯೂ, ಕಿವಿಯಿದ್ದ ಕಿವುಡನಂತೆಯೂ, ಬಾಯಿದ್ದ ಮೂಕನಂತೆಯೂ ಸುಮ್ಮನಿದ್ದನು.

ಅವನ ಅಲಕ್ಷ್ಯಭಾವದ ಪರಿಯನ್ನು ನೋಡಿ ಕೋಟಿಯು “ನನ್ನ ನಮಸ್ಕಾರಗಳು ನಿಮ್ಮ ಗುರು ಹಿರಿಯರಿಗೆ ಇರಲಿ” ಎಂದು ಹೇಳಿ ಅಲ್ಲಿಂದ ತಟ್ಟನೆ ಇಳಿದು, ತನ್ನ ಗದ್ದೆಯ ಹತ್ತಿರ ಬಂದನು. ಗದ್ದೆಯು ನೀರು ತುಂಬಿ ಕೆರೆಯಾಗಿತ್ತು. ಕೋಟಿಯು ತನ್ನ ಹೊರೆಯಿಂದ ಒಂದು ಗುದ್ದಲಿಯನ್ನು ಈಚೆಗೆ ತೆಗೆದು, ಗದ್ದೆಯ ತೆವರಿಯನ್ನು ಒಂದು ಕಡೆ ಕಡಿದುಬಿಟ್ಟನು. ಮೇಲಿನ ಗದ್ದೆಯ ನೀರೆಲ್ಲಾ

ನೆರೆಯ ನೀರಿನಂತೆ ಕೆಳಗಿನ ಗದ್ದೆಗೆ ಹರಿಯಿತು. ಜೋಯೆಂದು ಗದ್ದೆಗೆ ಧುಮುಕುವ ನೀರಿನ ಜೋಗನ್ನು ಕಂಡು, ಮಲ್ಲಯ ಬುದ್ಧಿವಂತನು ತನ್ನ ಆಳುಗಳನ್ನು ಕೂಗಿ ಕರೆದು, ಹುಲ್ಲು ಸೊಪ್ಪನ್ನು ತರಿಸಿ, ತೆವರಿಯ ಬಾಯನ್ನು ಕಟ್ಟಿಸಿ, ತನ್ನ ಗದ್ದೆಗೆ ನೀರು ಹನಿಯದಂತೆ ಮುಚ್ಚಿಸಿಬಿಟ್ಟನು.

ಆಗ ಕೋಟಿಯು "ಅಯ್ಯಾ, ನಿಮ್ಮ ಆಳುಗಳು ಗದ್ದೆಯ ಬಾಯಿ ಮುಚ್ಚುವುದು ಸರಿಯಲ್ಲ. ಎಣಲ ಕಾಲದ ಉಪ್ಪನ್ನ, ಸುಗ್ಗಿ ಕಾಲದ ಮಳೆಬೆಳೆ, ಇವು ನಮಗೂ ಸರಿ ನಿಮಗೂ ಸರಿ. ನಮ್ಮ ಮೇಲೆ ನಿಮಗೆ ಹಗೆ ಇದ್ದರೆ, ಅದನ್ನು ನಮ್ಮೊಡನೆ ಸಾಧಿಸಿರಿ; ಬಿತ್ತಿದ ಬೆಳೆಯೊಡನೆ ಸಾಧಿಸಬೇಡಿರಿ. ನೀತಿ ಪ್ರಕಾರ ಹೋಗುವ ನೀರು ನೀತಿ ಪ್ರಕಾರ ಹೋಗಲಿ" ಎಂದನು.

ಅದಕ್ಕೆ ಬುದ್ಧಿವಂತನು ಜರ್ಬಿನಿಂದ "ಏನೆಂದೆ? ನೀತಿಯೋ? ನೀತಿಗೀತಿ ನಿನಗೆ ಬಿಲ್ಲರ ಕುಟ್ಟಿಗೆ ಯಾರು ಕೊಟ್ಟರೋ? ನಿನ್ನ ಗದ್ದೆಯ ನೀರಿಗೆ ನನ್ನ ಗದ್ದೆಯ ದಾರಿಯೇ? ಗದ್ದೆ ಒತ್ತಿನ ಕಾಡು ಕಡಿ, ಕಾಲುವೆ ತೋಡು. ನೀರು ಬಿಡು-ಹೋಗುತ್ತದೋ ಇಲ್ಲವೋ ನೋಡು" ಎಂದು ಆರ್ಭಟಿಸಿದನು.

ಕೋಟಿಯು ಇನ್ನೂ ಸಮಾಧಾನದಿಂದ "ಅಯ್ಯಾ, ನಾನು ಬಂದೇ ಇಷ್ಟಾಯಿತು. ನನ್ನ ತಮ್ಮ ಚೆನ್ನಯ ಬಂದಿದ್ದರೆ, ಒಂದಕ್ಕೆ ಒಂದೂವರೆ ಆಗುತ್ತಿತ್ತು" ಎಂದನು.

"ಏನು ಬೊಗಳುತ್ತೀ? ನಿನ್ನ ತಮ್ಮ? ಅವನೇನು ಕಾಟಿಯ ಹಾಲು ಕುಡಿದವನೇ? ಅವನು ಬಾನನ್ನು ಒಡೆದು ಬರುತ್ತಾನೋ? ಇಲ್ಲವೆ ಭೂಮಿಯನ್ನು ಬಿರಿದು ಬರುತ್ತಾನೋ? ನಿನ್ನ ತಮ್ಮ!" ಎಂದು ಬುದ್ಧಿವಂತನು ಅಬ್ಬರದಿಂದ ಅಣಕಿಸಿದನು.

ಇವರಿಬ್ಬರ ಬಾಯಿಯ ಬಡಿದಾಟವನ್ನು ದೂರದಲ್ಲಿ ನಿಂತು ಕೇಳುತ್ತಲಿದ್ದ ಚೆನ್ನಯನು ತನ್ನ ಕತ್ತಿಯನ್ನು ಹಿಡಿದುಕೊಂಡು, ಸರಸರನೆ ಅಲ್ಲಿಗೆ ಬಂದನು. ಆದರೂ ಬುದ್ಧಿವಂತನ ಬಾಯಲ್ಲಿ ಬೈಗಳು ಅಡಗಲಿಲ್ಲ.

ಕೋಟಿಯು ಚೆನ್ನಯನನ್ನು ತಡೆದು, "ಮಲ್ಲಯ, ಬೇಡ, ಕೆಣಕಬೇಡ. ತಲೆಗೆ ಹೊಯ್ದ ನೀರು ಕಾಲಿಗೆ ಇಳಿಯುತ್ತದೆ. ಕಾಲಿಗೆ ಎರೆದ ನೀರು ತಲೆಗೆ ಏರುವುದೇ? ಕ್ರಮಪ್ರಕಾರವಾಗಿ

ಮೇಲಿಂದ ಕೆಳಕ್ಕೆ ಹರಿಯತಕ್ಕ ನೀರು ಕ್ರಮಪ್ರಕಾರವಾಗಿಯೇ ಹೋಗಲಿ. ಅಡ್ಡಗಟ್ಟಬೇಡ. ರೀತಿ ರಿವಾಜು ಮೀರಬೇಡ" ಎಂದು ಹೇಳಿ, ಮತ್ತೊಮ್ಮೆ ಕೈಮುಗಿದನು.

"ಕ್ರಮಗಿಮ, ರೀತಿರಿವಾಜು ನಿಮಗೆ ಮಂಡೆ..." ಎಂದು ಮಲ್ಲಯನ ನಾಲಿಗೆಯಿಂದ ಬೈಗಳು, ಸುರಿಯುವಷ್ಟರಲ್ಲಿ, ಚೆನ್ನಯನು ಅಣ್ಣನ ಕೈಯಿಂದ ಬಿಡಿಸಿಕೊಂಡು, ಚಟ್ಟನೆ ಚೀರಿ, ಬುದ್ಧಿವಂತನ ತಲೆ ಹಿಡಿದು, ಗಂಟಲು ಸೆರೆಯನ್ನು ಮಿಸುಕಿ, ಬೆನ್ನನ್ನು ಮುಟ್ಟಿ ಮುಳ್ಳು ಹುರಿಯನ್ನು ಮುರಿದು, ನೆಲದ ಮೇಲೆ ಅಗಂತನಾಗಿ ಕೆಡವಿ, ಬೆಳ್ಳಿಯ ಕಟ್ಟಿನ ಬಿಳಿಯ ಸುರಗಿಯನ್ನು ಮೂರು ಸಲ ಅವನ ಎದೆಗೆ ಹಾಕಿದನು. ಮಲ್ಲಯ ಬುದ್ಧಿವಂತನು ಕತ್ತಿಯ ತಿವಿತದಿಂದ ಬಿಸಿ ನೆತ್ತರವನ್ನು ನೊರೆನೊರೆಯಾಗಿ ಕಾರಿ, ಕಾಯಬಿಟ್ಟು ಕೈಲಾಸಕ್ಕೆ ಸಂದನು.

ಅನಂತರ ಬುದ್ಧಿವಂತನ ಶವಕ್ಕೆ ಕೋಟಿಚೆನ್ನಯರು ನೂತನ ಸಂಸ್ಕಾರ ಮಾಡಿದರು. ಅವರು ಹೆಣವನ್ನು ಗದ್ದೆಯ ತೋಡಿನಲ್ಲಿ ಇಟ್ಟು ಒಂದೊಂದು ಹಾರೆ ತುಂಬ ಮಣ್ಣು ತೆಗೆದು "ಈ ಮಣ್ಣು ಮುದ್ದೆ ನಿನ್ನ ತಲೆಯ ಮುಂಡಾಸು, ಇದು ಮೈಯ ಹಚ್ಚಡ, ಇದು ಕಂಬಿಯ ದೋತರ, ಇದು ಕಾಲಿನ ಎಕ್ಕಡ" ಎಂಬುದಾಗಿ ಹೇಳುತ್ತ, ಸುಗ್ಗಿಯ ಗದ್ದೆಯ ತವರಿಗೆ ಮಣ್ಣು ಮೆತ್ತುವಂತೆ ಹೆಣದ ಮೇಲೆ ಮಣ್ಣು ಮುಚ್ಚಿ. ಬುದ್ಧಿವಂತನ ಮನೆಯ ಕಡೆಗೆ ತಿರುಗಿದರು.

ಕೋಟಿಚೆನ್ನಯರನ್ನು ಕಾಣುತ್ತಲೇ ಬುದ್ಧಿವಂತನ ಹೆಂಡತಿಯ ಎದೆಯು ದಡದಡಿಸಿತು. ಬಾಯ ನೀರು ಒಣಗಿತು. ಅವಳು ಚೆನ್ನಯನ ಕೈಯಲ್ಲಿದ್ದ ರಕ್ತದ ಕತ್ತಿಯನ್ನು ಕಂಡು, ತನ್ನ ಗಂಡನಿಗೆ ಆಪತ್ತು ಬಂತೆಂದು ತಿಳಿದು 'ಕುಯ್ಯೋ' ಎಂದು ಕೂಗುತ್ತ ಕಂಬುಳದ ಗದ್ದೆಗೆ ಓಡಿದಳು. ಆಗ ಚೆನ್ನಯನು "ಅಣ್ಣಾ ಇದೀಗ ಸಮಯ! ನಮ್ಮ ಸಣ್ಣ ಕೈಗಳಿಂದ ಅಂದು ಕಸುಕೊಂಡು ಹೋದ ಚೆಂಡನ್ನು ದೊಡ್ಡ ಕೈಗಳಿಂದ ತಂದೆವೆಂಬುದಾಗಿ ನಾವು ಆಡಿದ ಮಾತನ್ನು ಸಲ್ಲಿಸುವುದಕ್ಕೆ ಇದೀಗ ಸಮಯ" ಎಂದು ಹೇಳಿ ಆ ಮನೆಯೊಳಕ್ಕೆ ಹೋಗಿ, ತಮ್ಮ ಚಿಕ್ಕಂದಿನ ಚೆಂಡನ್ನು ಹೊರಕ್ಕೆ ತಂದು, "ಅಣ್ಣಾ ಹೊತ್ತಾಯಿತು, ಇನ್ನು ಮನೆಗೆ ಹೋಗೋಣ" ಎಂದು ಹೇಳಿ: ಇಬ್ಬರೂ ತಮ್ಮ ಮನೆಯ ದಾರಿ ಹಿಡಿದರು.

ಇತ್ತ ಬುದ್ಧಿವಂತನ ಕೈಹಿಡಿದವಳು ನೆಟ್ಟಗೆ ಪಡುಮಲೆ ಬೀಡಿಗೆ ಹೋಗಿ, ಬಲ್ಲಾಳನ ಕಾಲಡಿಯಲ್ಲಿ ಬಿದ್ದು, ತನ್ನ ಮೂಗಿನ ಮೂಗುತಿ, ಕತ್ತಿನ ಸರಮಣಿ, ಕಿವಿಯ ಓಲೆ, ಕೈಯ ಬಳೆ,

ಇವನ್ನೆಲ್ಲಾ ಅತನ ಪಾದದಲ್ಲಿಟ್ಟು ತನ್ನ ದುಃಖವನ್ನೂ ದುರ್ದೆಶೆಯನ್ನೂ ಹೇಳಿಕೊಂಡಳು. ಬಲ್ಲಾಳನು "ಕೊಂದವರಿಗೆ ಕೊರೆ ತಪ್ಪಲಿಕ್ಕಿಲ್ಲ" ಎಂದು ಆಕೆಗೆ ಸಮಧಾನ ಹೇಳಿ, ಮನೆಗೆ ಕಳುಹಿಸಿಕೊಟ್ಟು, ಕೋಟಿ ಚೆನ್ನಯರನ್ನು ಕರೆತರುವುದಕ್ಕೆ ಕೂಡಲೇ ಆಳನ್ನು ಅಟ್ಟಿದನು. ನರಹತ್ಯದ ಸುದ್ದಿಯಿಂದ ಬೀಡಿನವರು ಬೆಚ್ಚಿಬೆದರಿದರು; ಹಳ್ಳಿಯವರು ಭಯಭೀತರಾದರು.

ಕೋಟಿಚೆನ್ನಯರು ಮನೆಗೆ ಮುಟ್ಟುವ ಮುಂಚೆಯೇ - ಅವರು ಮಾಡಿದ ಘಾತಕ ಕೃತ್ಯ, ಅದನ್ನು ಕುರಿತು ವಿಧವೆಯು ಹೇಳಿಕೊಂಡ ದುಃಖದ ದೂರು, ದೂರನ್ನು ಕೇಳಿ, ಬಲ್ಲಾಳನಿಗಾದ ಕರಿಕರಿ ಕೋಪ, ಇವುಗಳ ಸುದ್ದಿಯನ್ನೆಲ್ಲಾ ಅವರ ಸಾಕುತಾಯಿಯಾದ ಸಾಯಿನ ಬೈದಿತಿಯ ಕಿವಿಗೆ ಬಿದ್ದು, ಅವಳು ಕಳವಳಗೊಳ್ಳುತ್ತಿದ್ದಳು. ಅಷ್ಟರಲ್ಲಿ ಇವರಿಬ್ಬರೂ ಮನೆಗೆ ಬಂದರು.

ಅವರನ್ನು ಕಾಣುತ್ತಲೇ ಸಾಯಿನ ಬೈದಿತಿಯು "ಕೋಟಿ! ಏನಾಯಿತು? ಚೆನ್ನಯ! ಏನು ಮಾಡಿದಿ? ನಮಗೆ ಕೇಡುಗಾಲ ಬಂತಲ್ಲಾ!" ಎಂದು ಸಿಡಿಮಿಡಿಗೊಂಡು ಕೇಳಿದಳು.

ಆಗ ಕೋಟಿಯು "ಅಮ್ಮಾ ಬುದ್ಧಿವಂತನ ಬಾಯಿಂದ ಹದತಪ್ಪಿ ಮಾತು ಬಂತು. ಚೆನ್ನಯನ ಕೈಯಿಂದ ಹದ್ದುಮೀರಿ ಏಟುಬಿತ್ತು. ಬುದ್ಧಿವಂತನ ಹಾಳು ಒರಟುತನಕ್ಕೂ ಚೆನ್ನಯನ ಹರೆಯದ ದುಡುಕಿಗೂ ಸರಿಹೋಯಿತು" ಎಂದು ಹೇಳಿ ತಲೆ ತಗ್ಗಿಸಿನಿಂತನು.

ಸಾಯಿನ ಬೈದಿತಿಯು "ಮಕ್ಕಳೇ! ನೀವು ಮಾಡಿದ ಮಾಟಕ್ಕೆ ಬಲ್ಲಾಳನು ನಿಮ್ಮಾಟ ಅಡಗಿಸುತ್ತಾನಂತೆ. ನಿಮ್ಮನ್ನು ಬೆಟ್ಟದಿಂದ ಬೀಳಿಸುತ್ತಾನೋ ಮಡುವಿನಲ್ಲಿ ಮುಳುಗಿಸುತ್ತಾನೋ ಆನೆಯಿಂದ ತುಳಿಸುತ್ತಾನೋ ಕುದುರೆಯಿಂದ ಒದಿಸುತ್ತಾನೋ ಏನು ಮಾಡುತ್ತಾನೆಂಬುದು ಯಾರು ಬಲ್ಲರು? ದೇವರೇ!" ಎಂದುಸುರಿ ಅಳತೊಡಗಿದಳು.

ಅವಳ ಗೋಳನ್ನು ಕಂಡು ಚೆನ್ನಯನು "ಅಮ್ಮಾ! ನೀನೇಕೆ ಅಳುವೆ? ಈ ಕತ್ತಿಗೆ ಧಾರೆ ಇದೆ; ನನ್ನ ಕೈಗೆ ಚಳಕವಿದೆ. ನಾವು ಯಾರಿಗೂ ಹೆದರಬೇಕಾಗಿಲ್ಲ. ಯಾರಾದರೂ ಸರಿಯೆ, ನಮ್ಮನ್ನು ನೀತಿಯಿಂದ ಕಂಡರೆ, ಅವರಿಗೆ ಎದೆಯ ಮೇಲಿಂದ ಹಾದಿ ಕೊಟ್ಟೇವು. ಅನ್ಯಾಯದಿಂದ ಕಂಡರೆ, ಅವರ ಪ್ರಾಣವನ್ನು ಹೀರಿಬಿಟ್ಟೇವು" ಎಂದು ಬಿರುಸಿನಿಂದ ಹೇಳಿದನು.

ಸಾಯಿನ ಬೈದಿತಿಯು, "ಮಕ್ಕಳೇ! ಇನ್ನು ನಮಗೆ ಉಳಿಗಾಲವಿಲ್ಲ. ಇಲ್ಲಿ ಇನ್ನು ಮುಂದೆ ನಿಮಗೆ ನೀರು ನಂಜಾಯಿತು, ಊರು ಹಗೆಯಾಯಿತು. ಪಡುಮಲೆ ರಾಜ್ಯದಲ್ಲಿ ಒಂದು ಹಗೆ, ಒಂಭತ್ತು ಹಗೆ" ಎಂದಳು.

ಅದಕ್ಕೆ ಕೋಟಿಯು "ಹಾಗಾದರೆ ನಾವು ಪರರಾಜ್ಯಕ್ಕೆ ಹೋಗುತ್ತೇವೆ. ನಮ್ಮ ಈ ರಾಜ್ಯದಲ್ಲಿಯೇ ನೀರು ಬರೆದಿದೆಯೋ?" ಎಂದನು.

ಆ ಮಾತಿಗೆ ಬೈದಿತಿಯು "ಈ ನಿಮ್ಮ ಯೋಚನೆಯು ಬಲ್ಲಾಳನಿಗೆ ಗೊತ್ತಾದರೆ, ಅವನು ಸುಮ್ಮನಿರಲಿಕ್ಕಿಲ್ಲ. ನಿಮಗೆ ತನ್ನ ರಾಜ್ಯದಲ್ಲಿ ಬೆಂಕಿ ನೀರು ಕೊಡಕೂಡದೆಂದು ಡಂಗುರ ಹೊಡೆಯಿಸುವನು; ನೀವು ರಾಜ್ಯದ ಗಡಿ ದಾಟುವಾಗ ನಿಮ್ಮನ್ನು ಹಿಡಿದು ತರಬೇಕೆಂದು ಉಕ್ಕಡದವರಿಗೂ, ಸುಂಕದ ಕಟ್ಟೆಯವರಿಗೂ, ಅರವಟ್ಟಿಗೆಯವರಿಗೂ ಅಪ್ಪಣೆ ಮಾಡುವನು. ಅವನ ಕಣ್ಣು ಮರೆಸಿಕೊಂಡು ಹೋಗುವುದು ಸರಿಯೂ ಅಲ್ಲ, ಸಾಧ್ಯವೂ ಇಲ್ಲ" ಅಂದಳು.

"ಹಾಗಾದರೆ ಅವನನ್ನು ಬೀಡಿನಲ್ಲಿ ಕಂಡೇ ಹೋಗುವೆವು ಅವನ ಭಯವೇನು?" ಎಂದು ಚೆನ್ನಯನು ಹೇಳಿದನು.

ತಾಯಿಮಕ್ಕಳು ಹೀಗೆ ಮಾತನಾಡುತ್ತಿದ್ದಾಗ, ಬಲ್ಲಾಳನ ಕಡೆಯ ಜನರು ಬಂದು, ಕೋಟಿ ಚೆನ್ನಯರನ್ನು ಬೀಡಿಗೆ ಕರೆದುಕೊಂಡು ಹೋದರು. ಅವರು ಮನೆಯಿಂದ ಹೊರಡುವ ಮೊದಲು ಬೈದಿತಿಯು ಕೋಟಿಯನ್ನು ಕರೆದು, ಬಲ್ಲಾಳನು ಮುಂದೆ ಹೇಗೆ ಹೇಗೆ ನಡೆದುಕೊಳ್ಳಬೇಕೆಂದು ಆತನ ಕಿವಿಯಲ್ಲಿ ಹೇಳಿದಳು.

ಮನೆಯಿಂದ ಹೊರಟ ಕೋಟಿ ಚೆನ್ನಯರು ಬಲ್ಲಾಳನ ಆಳುಗಳೊಂದಿಗೆ ಪಾಲೆ ದಾಟಿ, ಬೈಲು ಕಳೆದು, ಬೆಟ್ಟ ಹತ್ತಿ. ಹಿತ್ತಲಿಗೆ ಇಳಿದು, ಅಡ್ಕವನ್ನು ಅಡರಿ, ಹೊಡೆಯಲ್ಲಿ ಹೋಗಿ ಹೊಳೆಯನ್ನು ಹಾಯ್ದು, ಕೋಟೆಯ ಆನೆಬಾಗಿಲನ್ನು ಹತ್ತಿ, ರಾಜಾಂಗಣಕ್ಕೆ ಬಂದು ಚಾವಡಿಯನ್ನು ಬಿಟ್ಟು ಪಡುವಣ ಪಟ್ಟಶಾಲೆಗೆ ಹೋಗಿ, ಬೆಳ್ಳಿಯ ಕಲಶದ ಬಿಳಿಯ ಉಪ್ಪರಿಗೆಯನ್ನು ಏರಿದರು. ಅವರು ರಾಜಾಂಗಣದಲ್ಲಿ ಬಂದಾಗಲೇ ಪಡುಮಲೆಯ ಪೆರುಮಳು ಬಲ್ಲಾಳನು ಉಪ್ಪರಿಗೆಯಿಂದ ಕಿಟಕಿ ಬಾಗಿಲಿನಿಂದ ಇಣಿಕಿ ನೋಡಿ, "ಓಹೋ ಅರೆಯಲ್ಲಿ ಇಲಿಯಂತೆ ಹುಟ್ಟಿದ ಮಕ್ಕಳು ಈಗ

ಹುಲಿಯಂತಾಗಿದ್ದಾರೆ" ಎಂದು ತನ್ನೊಳಗೆ ತಿಳಿದುಕೊಂಡು, ಅವರ ವಿಚಾರಣೆ ನಡಿಸುವುದಕ್ಕೆ ಓಲಗವನ್ನು ಕೊಡುವಂಥವನಾದನು.

ಕೋಟಿ ಚೆನ್ನಯರು ಒಳಕ್ಕೆ ಬಂದು, ಅರಸುಮಣೆಯ ಮೇಲೆ ಕುಳಿತುಕೊಂಡು ಓಲಗವನ್ನು ಕೊಡುತ್ತಿದ್ದ ಪಡುಮಲೆ ಬಲ್ಲಾಳನಿಗೆ ಅಡ್ಡಬಿದ್ದರು.

ಬಲ್ಲಾಳನು "ಮಾಡಬಾರದ್ದನ್ನು ಮಾಡಿದಿರಿ. ಈಗ ಆಗಬಾರದ್ದು ಆಗಬೇಕಷ್ಟೆ" ಎಂದು ಮೊದಲಿಟ್ಟನು.

ಆಗ ಕೋಟಿಯು ತನಗೆ ಸಾಯಿನ ಬೈದಿತಿಯು ಕಿವಿಯಲ್ಲಿ ಹೇಳಿದ ಮಾತನ್ನು ನೆನಸಿಕೊಂಡು, "ಬುದ್ಧಿ! ನಮ್ಮ ತಾಯಿಗೆ ತಾವು ಕೊಟ್ಟ ಮಾತುಂಟಷ್ಟೆ" ಎಂದನು.

"ಯಾವ ಮಾತು?" ಎಂದು ಬಲ್ಲಾಳನು ಕೇಳಿದನು.

"ಬುದ್ಧೀ, ಈ ಒಡವೆ ವಸ್ತುಗಳೆಲ್ಲಾ ನಿನಗೆ. ಇನ್ನು ಕೊಡಲಿಕ್ಕೆ ಇರುವುದನ್ನು ಮುಂದೆ ನಿನ್ನ ಮಕ್ಕಳಿಗೆ ಕೊಡುತ್ತೇನೆ ಎಂದು ತಾವು ನಮ್ಮ ತಾಯಿಗೆ ಮಾತು ಕೊಡಲಿಲ್ಲವೇ?" ಎಂದು ಕೋಟಿಯು ಕೇಳಿದನು.

ಬಲ್ಲಾಳ-"ಕೋಟಿ, ನಿನ್ನ ತಾಯಿಗೆ ನಾವು ಆಗ ಕೊಟ್ಟ ಮಾತಿಗೂ ನೀವು ಈಗ ಮಾಡಿದ ತಪ್ಪಿಗೂ ಏನೂ ಸಂಬಂಧವಿಲ್ಲ."

ಕೋಟಿ-"ಬುದ್ಧಿ, ನಾವು ಆಳು ಕೊಂದದ್ದಕ್ಕೆ ನಮಗೆ ಆಗುವುದು ಆಗಲಿ! ಆದರೆ ನೀವು ಮಾತು ಕೊಟ್ಟದ್ದಕ್ಕೆ ನಮಗೆ ದೊರೆಯುವುದು ದೊರೆಯಲಿ!"

ಚೆನ್ನಯ-"ನಾವು ಸತ್ತನಂತರ ನಿಮ್ಮ ಹತ್ತಿರ ಕೇಳುವವರು ಯಾರು?"

ಬಲ್ಲಾಳ-"ಏನು ಬೇಕು ಕೇಳಿ, ಕೊಡುತ್ತೇನೆ."

ಕೋಟಿ-"ಬೀಡಿನ ಮುಂದಿನ ಬಾಕಿಮಾರು ಗದ್ದೆ."

ಬಲ್ಲಾಳ-"ಅದಾಗದು."

ಕೋಟಿ-"ಹಾಲು ಬತ್ತದ ಸರಳೆಮ್ಮೆ."

ಬಲ್ಲಾಳ-"ಅದು ನಮಗೆ ಬೇಕು."

ಕೋಟಿ-"ಇಡೀ ವರ್ಷ ಕಾಯಿ ಮಿಡಿ ಹಣ್ಣುಗಳನ್ನು ಒಟ್ಟಿಗೆ ಬಿಡುತ್ತಿರುವ ಆ ಹಲಸಿನ ಮರ."

ಬಲ್ಲಾಳ-"ಅದನ್ನು ಬಿಡು. ಬೇರೊಂದು ಕೇಳು."

ಚೆನ್ನಯ-"ನಿಮ್ಮ ಇಬ್ಬರು ಹೆಂಡಿರ ಹೂದೋಟಗಳನ್ನು ಕೊಡಿಸಿ."

ಬಲ್ಲಾಳ-"ಏನಂದೆ?"

ಚೆನ್ನಯ-"ನಿಮ್ಮ ಪಟ್ಟದ ಕತ್ತಿ."

ಬಲ್ಲಾಳನು ಕೋಪದಿಂದ ಕೆಂಪೇರಿ "ಬೀಡಿನ ಹಾಲಿನಿಂದ ಬೆಳೆದ ನೀವು ನಮ್ಮ ಹೆಂಡಿರ ಹೂದೋಟಗಳನ್ನೂ, ನಾವು ಹಿಡಿಯುವ ಪಟ್ಟದ ಕತ್ತಿಯನ್ನೂ ಬಯಸಿದ ಮೇಲೆ ಮುಂದೆ ಯಾವುದನ್ನು ಕೇಳುವಿರಿ, ಏನನ್ನು ಮಾಡುವಿರಿ ಎಂದು ಹೇಳಲಾಗುವುದಿಲ್ಲ. ನಿಮ್ಮನ್ನು ಹೀಗೆ ಬಿಡಲಾಗದು" ಎಂದು ಹೇಳಿ, ಅವರನ್ನು ಹೆಡೆಮುಡಿ ಕಟ್ಟಿ ತೆಗೆದುಕೊಂಡು ಹೋಗಲು ತನ್ನ ಕಡೆಯವರಿಗೆ ಕಟ್ಟಾಜ್ಞೆ ಮಾಡಿದನು.

"ಕೇಳದ ಉಚಿತ ಕೇಳಿದರೆ ಬಲ್ಲಾನಿಗೆ ಬಾರದ ಕೋಪವು ಬರುತ್ತದೆ" ಎಂದು ಬೈದಿತಿಯು ತನಗೆ ಹೇಳಿದ್ದು ಸತ್ಯವೆಂದು ಕೋಟಿಗೆ ಈಗ ನೆನಪಿಗೆ ಬಂದು, ಅವನು ತನ್ನ ಹೆಚ್ಚಡದೊಳಗೆ ಅಡಗಿಸಿಟ್ಟಿದ್ದ ಒಂದು ಚೀಲವನ್ನು ಮೆಲ್ಲನೆ ಬಿಚ್ಚಿದನು. ಆ ಚೀಲದಲ್ಲಿ ವೀಳ್ಯದೆಲೆಯ ಕವಳಿಗೆಗಳು ಇದ್ದುವು. ಹಾಲೆಮರಕ್ಕೆ ಹೋಗ ಬಿಟ್ಟ ಪಂಚವಳ್ಳಿ ಜಾತಿಯ ವೀಳ್ಯ, ಮಾವಿನ ಮರಕ್ಕೆ ಹೋಗಬಿಟ್ಟ ಮುಂಡುವಳ್ಳಿ ಜಾತಿಯ ವೀಳ್ಯ-ಕೋಟಿಯು ವೀಳ್ಯದೆಲೆಯ ಕವಳಿಗೆಗಳನ್ನು ಕೈಯಲ್ಲಿ ಹಿಡಿದು ಬಲ್ಲಾಳನು ಓಲಗವಾಗಿದ್ದಲ್ಲಿಗೆ ಹೋಗಿ, "ನಮ್ಮ ಮಾತನ್ನು ಸಲ್ಲಿಸುವುದಕ್ಕೆ ಆರು ವರ್ಷದ ಗಡುವು" ಎಂದು ಗಟ್ಟಿಯಾಗಿ ಒದರಿ, ಆ ವೀಳ್ಯದೆಲೆಯನ್ನು ಗದ್ದಿಗೆಯ ಮೇಲೆ ಇಟ್ಟು ಹೆದರದೇ ಅಲ್ಲಿಯೇ ನಿಂತನು. ಕೋಟಿಯು ಗಡುವಿಟ್ಟಿದ್ದನು ಕಂಡು ಬಲ್ಲಾಳನ ಉಪ್ಪರಿಗೆಯೇ ಗಡಗಡನೆ ನಡುಗಿತು.

ಅಂತಃಪುರದಲ್ಲಿ ದಿಗಿಲು ಉಂಟಾಯಿತು; ಬೀಡಿನವರೆಲ್ಲಾ ಮೂಕರಂತೆ ಪಿಳಪಿಳನೆ ನೋಡಿದರು. ಅಲ್ಲಿದ್ದವರೆಲ್ಲರು ಕೋಟಿ ಚೆನ್ನಯರ ಆ ವೀರಾವೇಶಕ್ಕೆ ಬೆದರಿ ಅವರ ಮೈ ಮುಟ್ಟುವಷ್ಟು ಧೈರ್ಯವಿಲ್ಲದೆ ಅಂಜುಬುರುಕರಂತೆ ಹಿಂಜರಿದರು.

ಕೋಟಿ ಚೆನ್ನಯರು ಯಾರ ತಡೆಯೂ ಇಲ್ಲದೆ ಬಡಬಡ ಉಪ್ಪರಿಗೆಯ ಮೆಟ್ಟಲು ಇಳಿದು ಬೀಡಿನಿಂದ ಮಾಯವಾದರು.

ಕನಸು ಕಂಡಂತೆಯೂ ಕಣ್ಣುಕತ್ತಲೆ ಬಂದಂತೆಯೂ ಅರಸುಮಣೆಯಲ್ಲಿಯೇ ಮರವೆಗೊಂಡಿದ್ದ ಪೆರುಮಾಳ ಬಲ್ಲಾಳನು ಒಂದು ತಾಸಿನ ತರುವಾಯ ಕಣ್ಣು ತೆರೆದು “ಬೆಳೆಯಿಟ್ಟ ಬಳ್ಳಿಯು ಬೆಳಿಸಿದವನನ್ನೇ ಬಂಧಿಸಿಬಿಟ್ಟಿತಲ್ಲಾ” ಎಂದು ಯೋಚಿಸಿ, “ಈ ಬಿಲ್ಲರ ಕೊಬ್ಬು ಬೀಡಿಗೆ ಕೆಡುಕು, ನಾಡಿಗೆ ತೊಡಕು” ಎಂದು ಬಗೆದು, ಅವರನ್ನು ಹಿಡಿದು ಕೊಲ್ಲಿಸುವುದಕ್ಕೆ ನಾನಾ ಪ್ರಕಾರವಾಗಿ ಸಾಧಿಸಿದನು.

ಬಲ್ಲಾಳನ ಕೈಗೆ ಸಿಗದೆ ಅವನ ರಾಜ್ಯದಲ್ಲಿ ಯಾರ ಹಂಗು ಹೆದರಿಕೆ ಇಲ್ಲದೆ ಸುತ್ತಾಡುತ್ತಿದ್ದ ಕೋಟಿ ಚೆನ್ನಯರು ಒಂದು ದಿನ ನಡುಹಗಲು ಬಿಸಿಲಲ್ಲಿ ದಾರಿ ನಡೆದು, ಬಳಲಿ ಬೇಸತ್ತು. ದಣುವಾರಿಸುವುದಕ್ಕೆಂದು ಒಂದು ಅರಳಿಕಟ್ಟೆಯ ಹತ್ತಿರ ಬಂದರು. ಆ ಕಟ್ಟೆ ಪರಿಷ್ಕಾರವಾಗಿತ್ತು. ಕಪ್ಪಾದರೂ ಕನ್ನಡಿಯಂತೆ ಬೆಳಗುವ ನೆಲ, ನೆಲದ ಮೇಲೆ ನಾಲ್ಕು ಕೊಡ ನೀರು ಹಿಡಿಯುವ ಗಡಿಗೆ, ಗಡಿಗೆಯ ಹತ್ತಿರ ಒಂದು ಬಿಂದಿಗೆ. ಅದರ ಎಡಕ್ಕೆ ಸ್ವಲ್ಪ ದೂರದಲ್ಲಿ ಒಂದು ಕಂಚಿನ ಕೈದಂಬೆ-ಇವುಗಳಿಂದ ಅದು ಅರವಟ್ಟಿಗೆ ಕಟ್ಟೆ ಎಂದು ಗೊತ್ತಾಗುತ್ತಿತ್ತು.

ಕಟ್ಟೆಯ ಪಕ್ಕದಲ್ಲಿ ನಿಂತುಕೊಂಡು ಚೆನ್ನಯನು “ಯಾರೂ ಇಲ್ಲವೇ? ಆಸರಿಗೆ ನೀರು ಬೇಕು!” ಎಂದು ಕೂಗಿದನು.

ಆಗ ಕಟ್ಟೆಯ ಹಿಂದುಗಡೆಯ ಒಂದು ಹುಲ್ಲುಗುಡಿಸಲಿಂದ ಒಬ್ಬ ಬ್ರಾಹ್ಮಣನು ಕಟ್ಟೆ ಹತ್ತಿ ಬಂದು, ಇವರನ್ನು ಕಂಡು ಅರೆಗಳಿಗೆ ಹಾಗೆ ನೋಡುತ್ತಾ. “ನಿಮ್ಮ ಜಾತಿನೀತಿ ಗೊತ್ತಾಗಬೇಕಾಯಿತು” ಎಂದು ಹಗುರವಾಗಿ ಕೇಳಿದನು.

ಕೋಟ-“ನಾವು ಜಾತಿಯಲ್ಲಿ ಮುರ್ತೆ ಮಾಡುವವರು.”

ಚೆನ್ನಯ-“ನೀತಿಯಲ್ಲಿ ನೂಲು ಹಾಕಿದವರು.”

“ಹಾಗಾದರೆ ತೆಂಕಲ ಮಗ್ಗುಲಲ್ಲಿ ಬನ್ನಿ. ಕಂಚಿನ ಕೈದಂಬೆಯಲ್ಲಿ ನೀರು ಹೊಯ್ಯುತ್ತೇನೆ. ಕೈಕೊಟ್ಟು ಆಸರು ಆರಿಸಿಕೊಳ್ಳಿ? ಎಂದು ಅರವಟ್ಟಿಗೆಯವನು ಸ್ವಲ್ಪ ಧೈರ್ಯದಿಂದ ಹೇಳಿದನು.

ಅದಕ್ಕೆ ಚೆನ್ನಯನು “ನೂರು ಕುಲದವರ ಎಂಜಲ ದಂಬೆಯಲ್ಲಿ ಕುಡಿಯುವಂಥವರು ನಾವಲ್ಲ!” ಎಂದನು.

ಬ್ರಾಹ್ಮಣನು ಗಾಬರಿಗೊಂಡು, “ನಾನು ಏನು ಮಾಡಲಿ?” ಎಂದು ದೈನ್ಯದಿಂದ ಹೇಳಿದನು. ಆ ನಮ್ರತೆಯ ಮಾತಿಗೆ ಕೋಟಿಯು “ನಾವು ಕೈಯೊಡ್ಡುತ್ತೇವೆ” ಎಂದನು.

“ಬೇಡಣ್ಣ. ನನ್ನ ಕತ್ತಿಯ ಹಿಡಿಯನ್ನು ಹೀಗೆ ಒಡ್ಡುತ್ತೇನೆ. ನೀರು ಎರೆಯಲ್ಲಿ” ಎಂದು ಹೇಳಿ ಚೆನ್ನಯನು ತನ್ನ ಕತ್ತಿಯ ತುದಿನ್ನು ಬಾಯೊಳಗೆ ಇಟ್ಟು, ಅದರ ಹಿಡಿಯನ್ನು ಬ್ರಾಹ್ಮಣನ ಕಡೆ ಒಡ್ಡಿದನು. ಬ್ರಾಹ್ಮಣನು ನೀರು ಸುರಿದನು. ಚೆನ್ನಯನು ಒಂದೇ ಒಂದು ತೊಟ್ಟು ಕೆಳಗೆ ಬೀಳಿಸದೆ ನೀರು ಕುಡಿದ ಚಮತ್ಕಾರವನ್ನು ನೋಡಿ, ಆ ಬ್ರಾಹ್ಮಣನು ಅಚ್ಚರಿಗೊಂಡನು.

ಹೀಗೆ ಇಬ್ಬರು ಆಸರುಬೇಸರು ಕಳೆದನಂತರ ಕೋಟಿಯು “ಸ್ವಾಮಿ, ತಾವು ಯಾರು? ಅರವಟ್ಟಿಗೆಯ ಬ್ರಾಹ್ಮಣರೋ? ಇಲ್ಲವೆ ಶಕುನ ಹೇಳುವ ಭಟ್ಟರೋ?” ಎಂದು ಕೇಳಿದನು.

ಅದಕ್ಕೆ ಬ್ರಾಹ್ಮಣನು “ಬೇಕಾದರೆ ನಾನೇ ಶಕುನ ಹೇಳುತ್ತೇನೆ” ಎಂದು ಹೇಳಿ ತನ್ನ ಗುಡಿಸಲಿಗೆ ಇಳಿದು ಹೋಗಿ. ಬಿಳಿಗೆರೆಯ ಮಂಡಲದ ಮಣಿ, ಕವಡೆ ತುಂಬಿದ ಚೀಲ, ದರ್ಭೆ ಹುಲ್ಲಿನ ಚಾಪೆ-ಇವನ್ನು ಹಿಡಿದುಕೊಂಡು ಬಂದು, ಕಣಿ ಹೇಳುವುದಕ್ಕಾಗಿ ಕುಳಿತುಕೊಂಡನು. ಕೋಟಿಚೆನ್ನಯರೂ ಅಲ್ಲೇ ಕುಳಿತು ನೋಡುತ್ತಿದ್ದರು. ಬ್ರಾಹ್ಮಣನು ಒಮ್ಮೆ ಕವಡೆಗಳನ್ನು ಲೆಕ್ಕ ಮಾಡಿದನು; ಕೈ ಬೆರಳುಗಳನ್ನು ಎಣಿಕೆ ಮಾಡಿದನು; ಜೇಡಿಮಣ್ಣಿನ ಚೂರಿನಿಂದ ನೆಲದ ಮೇಲೆ ಬರೆದನು; ಗುಣಿಸಿ ನೋಡಿದನು; ಮಣಮಣ ಮಂತ್ರ ಹೇಳಿದನು. ಕಡೆಗೆ ಇಬ್ಬರ ಮೊಗವನ್ನು ದಿಟ್ಟಿಸಿ. “ಎರಡು ಮರಿಯಾನೆಗಳು ಕಾಡಿನಿಂದ ಹೊರಬಿದ್ದು, ತೋಡನ್ನು ಕಲಕಿ, ಗದ್ದೆಯನ್ನು ತುಳಿದು, ಕಬ್ಬಿನ ತೋಟದ ಮೇಲೆ ಕಣ್ಣಿಟ್ಟಂತೆ ತೋರುತ್ತದೆ” ಎಂದನು.

ಚೆನ್ನಯನು "ಸರಿ, ಜೋಯಿಸರೇ! ಚೆನ್ನಾಗಿ ಹೇಳಿದಿರಿ, ಇನ್ನೇನು ಕಾಣುತ್ತದೆ?" ಎಂದು ಕೇಳಿದನು.

ಬ್ರಾಹ್ಮಣನು ಚೆನ್ನಾಗಿ ಗುಣಿಸಿ ನೋಡಿ, "ಆನೆ ಮರಿಗಳಿಗೆ ನಾಲ್ಕು ಕಡೆ ಅಪಾಯ, ಮೂಡು ಕಡೆಯಿಂದ ಕಿಚ್ಚಿನ ಅಪಾಯ, ಪಡುಕಡೆಯಿಂದ ಕರ್ಪದ ಮೋಸ, ಬಡಗಿನಿಂದ ಕೋವಿಯ ಏಟು, ತೆಂಕಲಿಂದ ಮೊಸಳೆಯ ಕಾಟ-ಹೀಗೆಲ್ಲಾ ತೋರುತ್ತದೆ" ಎಂದು ಹೇಳಿ "ನೀವು ಮಾತ್ರ _" ಎಂದು ಮಾತು ಮುಗಿಸುವಷ್ಟರಲ್ಲಿ ಚೆನ್ನಯನು, "ನಮಗೆ ಏನಾಗುತ್ತದೆಂದು ಹೇಳಿಬಿಡಿ" ಎಂದು ಒದರಿದನು.

ಚೆನ್ನಯನ ಗರ್ಜನೆಗೆ ಬ್ರಾಹ್ಮಣನ ಬೆರಳೆಣಿಕೆ ತಪ್ಪಿ ಹೋಯಿತು; ಅವನು ಮತ್ತೆ ಲೆಕ್ಕ ಹಾಕಿ "೧೯೯ರ ಮೇಲೆ ಬಿಡಬೇಕು" ಎಂದು ಸೂಚಿಸಿದನು.

ಕೋಟಿ-"ಇನ್ನೂರು ಬಿಡಬೇಕೆ?" ಎಂದು ಕೇಳಿದನು.

ಬ್ರಾಹ್ಮಣ-"ಇನ್ ಊರು ಬಿಡು; ಮುಂದೆ ಹತ್ತು. ಹತ್ತು. ಹತ್ತು. ಹತ್ತು ಹೀಗೆ ಏರಿಸಿ ಹೋಗಬೇಕು" ಎಂದನು.

"ಎಲ್ಲಿಯವರೆಗೆ?"

ಅದಕ್ಕೆ ಬ್ರಾಹ್ಮಣನು ತನ್ನ ಬಲಗೈಯ ಬೆಳುಗಳನ್ನು ಬಿಡಿಸಿ ತೋರಿಸಿ "ಇಲ್ಲಿಯವರೆಗೆ ಹೋಗಬೇಕು" ಎಂದನು

ಕೋಟಿಯು "ಐನೂರನ್ನು ಮುಟ್ಟಿದ ಮೇಲೆ ನಮಗೆ ಮುಹೂರ್ತಗಳು ಕೂಡಿ ಬಂದಾವೋ?" ಎಂದು ತಿರುಗಿ ಪ್ರಶ್ನೆ ಇಟ್ಟನು.

ಬ್ರಾಹ್ಮಣನು ಕವಡೆಗಳನ್ನು ಆಡಿಸಿಬಿಟ್ಟು, "ಅಯ್ಯನ್ನೂರನ್ನು ಮುಟ್ಟಿದ ನಂತರದ ದಿನಗಳಲ್ಲಿ ವಿಷಗಳಿಗೆ ಸಂದರ್ಭಗಳೇ ಹೆಚ್ಚು; ಜಗಳದ ಕುರುಹೂ ತೋರುತ್ತದೆ" ಎಂದನು.

ಕೋಟಿ-"ಯಾರೊಳಗೆ ಜಗಳ?"

ಬ್ರಾಹ್ಮಣ-"ನೆಗಳೆಗೂ, ಆನೆಗೂ."

ಚೆನ್ನಯ-“ಜಗಳದಲ್ಲಿ ನಾನು ಮೊಸಳೆಯನ್ನು ಸೀಳಿಬಿಟ್ಟರೋ?”

ಕೋಟಿಯು “ಜಗಳದಲ್ಲಿ ಏನಾಗುವುದೆಂದು ನೋಡಿ ಹೇಳಿರಿ” ಎಂದು ಮರಳಿ ಪ್ರಶ್ನೆ ಇಟ್ಟನು.

ಬ್ರಾಹ್ಮಣನು ಮತ್ತೊಮ್ಮೆ ಕವಡೆಗಳನ್ನು ಮುಗುಚಿಹಾಕಿ, “ಜಗಳದಲ್ಲಿ ಆಆಆಆ” ಎಂದು ಬಾಯಿ ತೆರೆದು ಆಕಳಿಸಿದನು.

ಚೆನ್ನಯ-“ಜೋಯಿಸರೇ, ಸೊಲ್ಲು ಹೊರಡುವುದಿಲ್ಲವೇ?”

ಬ್ರಾಹ್ಮಣನು “ಬೈದ್ಯರೇ, ಆನೆಗಳೆ ನೆಲಕ್ಕೆ ಬಿದ್ದು ಸತ್ಯದ ಬುಗ್ಗೆ ಒಸರೀತು; ಕೀರ್ತಿಯ ಹೊಳೆ ಹರಿದೀತು; ಶಾಂತಿಯ ಬೆಳೆ ಬೆಳೆದೀತು; ಸೌಖ್ಯದ ಫಲ ಫಲಿಸೀತು” ಎಂದು ಹೇಳುತ್ತ ದೇವರ ಹೆಸರೆತ್ತಿ, ಮಣಿಗೂ ಕಾಯಿಚೀಲಕ್ಕೂ ಪೊಡಮುಟ್ಟು, ನಿಮಿತ್ತ ಹೇಳುವುದನ್ನು ಮುಗಿಸಿ, ಒಳಕ್ಕೆ ಹೋದನು.

ಕೋಟಿಚೆನ್ನಯರ ಮನಸ್ಸಿಗೆ ಬ್ರಾಹ್ಮಣನು ಹೇಳಿದ್ದೆಲ್ಲಾ ರುಚಿಸಿತೋ ಇಲ್ಲವೋ ಗೊತ್ತಾಗಲಿಲ್ಲ. ಆದರೂ ಬ್ರಾಹ್ಮಣನು ಮನೆಯೊಳಗಿಂದ ಹೊರಕ್ಕೆ ಬರುವವರೆಗೆ ಕೋಟಿಯು ಅಲ್ಲಿಂದ ಏಳಲಿಲ್ಲ.

ಒಂದು ಗಳಿಗೆಯ ತರುವಾಯ ಬ್ರಾಹ್ಮಣನು ಎರಡು ಬಿಂದಿಗೆಗಳನ್ನು ತಂದು ಅವರ ಮುಂದಿಟ್ಟನು. ಅಣ್ಣತಮ್ಮಂದಿರು ಬಿಂದಿಗೆಯ ಹಾಲು ಕುಡಿದು, ತಟ್ಟೆಯಲ್ಲಿ ಇಟ್ಟಿದ್ದ ವೀಳ್ಯದೆಲೆಯನ್ನು ಕೈಯಲ್ಲಿ ತೆಗೆದುಕೊಂಡರು.

ಇಷ್ಟರಲ್ಲಿ ಹೊತ್ತು ಮುಳುಗುವ ಸಮಯವಾಗಲು ಅವರು ಬ್ರಾಹ್ಮಣನಿಗೂ ಅವನ ಕವಡೆ ಮಣಿಗೂ ಬಗ್ಗಿ ನಮಸ್ಕಾರ ಮಾಡಿ, ಕಟ್ಟೆಯಿಂದಿಳಿದು, ಮುಂದಕ್ಕೆ ತೆರಳಿದರು.

ಆ ಅರವಟ್ಟಿಗೆಯ ಕಟ್ಟೆ ಎಲ್ಲಿತ್ತೋ ಅಲ್ಲಿಂದ ಪಡುಮಲೆ ಬಲ್ಲಾಳನ ಸೀಮೆಯ ಗಡಿಕಲ್ಲಿಗೆ ಬಹಳ ದೂರವಿರಲಿಲ್ಲ; ತಕ್ಕಷ್ಟು ಎತ್ತರದ ಒಂದು ಗುಡ್ಡ ಮಾತ್ರ ಮಧ್ಯದಲ್ಲಿತ್ತು. ಕೋಟಿಚೆನ್ನಯರು

ಆ ಗುಡ್ಡವನ್ನು ಏರಿ, ಅಡ್ಡಹಾದಿಯಿಂದ ಹೋಗುತ್ತಿದ್ದಾಗ, ಚೆನ್ನಯನು "ಇದೇನು ಆಶ್ಚರ್ಯ! ಅಣ್ಣಾ, ಮೂಡು ದಿಕ್ಕಿನಲ್ಲಿ ದೇವರು ಮುಳುಗುತ್ತಾರೋ?" ಎಂದು ವಿಚಾರಿಸಿದನು.

ಕೋಟಿಯು ಮೋರೆ ತಿರುಗಿಸಿ, ಕೊಂಬು ಕೂಗಿನ ದೂರದಲ್ಲಿ ಕಾಣುವ ಕೆಂಬಣ್ಣವನ್ನು ಕಂಡು, "ತಮ್ಮಾ ಸರಿ-ಅಲ್ಲಿಯೇ ನಮ್ಮ ಮನೆಯಲ್ಲವೇ? ಹೌದು-ಇದು ಹೊತ್ತು ಮುಳುಗುವ ಬಣ್ಣವಲ್ಲ; ನಮ್ಮ ಮನೆ ಹೊತ್ತಿ ಮೇಲೆ ಆಡುವ ಬೆಂಕಿಯ ನಾಲಗೆ" ಎಂದನು.

ಚೆನ್ನಯನು "ಅಣ್ಣಾ, ಜೋಯಿಸರು ಮೂಡುಗಡೆಯಿಂದ ಕಿಚ್ಚಿನ ಅಪಾಯವುಂಟೆಂದು ಕಣಿಹೇಳಿದ್ದು ನಿಜವಾಯಿತು. ಅಯ್ಯೋ! ಮನೆಯವರು ಏನಾದರೋ?" ಎಂದು ನಿಟ್ಟುಸಿರು ಬಿಟ್ಟನು.

ಕೋಟಿಯು "ಅವರು ಮೊನ್ನೆಯೇ ಮನೆಬಿಟ್ಟು ಹೋಗಿರಬಹುದು. ದೇವರು ಮನಸ್ಸಿನಲ್ಲಿದ್ದರೆ, ನಾವು ನಮ್ಮ ತಾಯಿಯನ್ನು ಇನ್ನೊಮ್ಮೆ ನೋಡುವೆವು" ಎಂದು ಸಂತಯಿಸುತ್ತ ಮುಂದರಿದನು. ಅವರು ಸೀಮೆಯ ಗಡಿಕಲ್ಲನ್ನು ಮುಟ್ಟುವಾಗ ಎರಡು ಗಳಿಗೆ ಇರುಳು ಆಯಿತು. ಗಡಿಕಲ್ಲಿನಿಂದ ಒಂದು ಮಾರು ಈಚೆಗೆ ಸುಂಕದ ಕಟ್ಟೆ ಇತ್ತು. ಅಲ್ಲಿ ದೇರೆ ಎಂಬುವನು ಇವರ ಕಾಲಿನ ಸದ್ದನ್ನು ಕೇಳಿ "ಕತ್ತಲಲ್ಲಿ ಯಾರದು ಹೋಗುವುದು?" ಎಂದು ವಿಚಾರಿಸಿದನು.

"ನಾವು ದಾರಿಹೋಕರು" ಎಂದು ಕೋಟಿಯು ಉತ್ತರ ಕೊಟ್ಟನು.

"ಯಾರೇ ಆಗಲಿ, ದಾರಿಸುಂಕ ಕೊಟ್ಟು ಹೋಗಿ" ಎಂದು ದೇರೆಯು ಇದ್ದಲ್ಲಿಂದ ಕದಲದೆ ಹೇಳಿದನು.

ಕೋಟಿ-"ಯಾವ ಸುಂಕವೋ? ನಮ್ಮ ಮೈ ಬೆವರಿನ ಉಪ್ಪಿನ ಸುಂಕವೋ? ಬಾಯಿ ವೀಳ್ಯದ ಸುಣ್ಣದ ಸುಂಕವೋ?"

ಚೆನ್ನಯ-"ತಲೆಯ ಮೇಲಿನ ಕೂದಲು ಸುಂಕವೋ? ಕಾಲಿಗೆ ಹಾಕಿದ ಎಕ್ಕಡದ ಸುಂಕವೋ?"

ಆಗ ದೇರೆಯು ಹೊರಕ್ಕೆ ತಲೆ ಹಾಕಿ "ನಿಮ್ಮ ಕೈಯಲ್ಲಿನ ಉಕ್ಕಿನ ಕತ್ತಿಯ ಸುಂಕ" ಎಂದನು.

ಚೆನ್ನಯನು "ನಮ್ಮ ಕತ್ತಿಗೆ ಕ್ರಯ ಕಟ್ಟುವವರು ಹಿಂದೆ ಹುಟ್ಟಿಲ್ಲ. ಮುಂದೆ ಹುಟ್ಟಲಿಕ್ಕಿಲ್ಲ" ಎಂದನು. ಅದಕ್ಕೆ ಸುಂಕದವನು "ಬಂಟರ ಕಾಲಿನ ಎಕ್ಕಡದ ಹೂವಿನ ಮೇಲೆ ಸುಂಕ, ಸೆಟ್ಟಿಯ ಕೊಡೆಯ ಕಾವಿನ ಮೇಲಿನ ಸುಂಕ, ಅರಸು ಮಗನ ದಂಡಿಗೆಯ ಕೊಂಬಿನ ಮೇಲೆ ಸುಂಕ - ಇಷ್ಟೆಲ್ಲಾ ಸುಂಕವನ್ನು ನಾವು ತೆಗೆದುಕೊಂಡಿದ್ದೇವೆ. ನಿಮ್ಮನ್ನು ಬಿಡುವುದುಂಟೇ?" ಎಂದನು.

ಚೆನ್ನಯನು "ನಮ್ಮನ್ನು ಹಿಡಿಯುತ್ತೀಯಾ? ಬಾ ಕೆಳಗೆ, ಬಿಂಕದ ಬಲ್ಲಾಳನಿಗೆ ಕದಲದ ನಾವು ಸುಂಕದ ಕಲ್ಲಾಳನಿಗೆ ಬೆದರುವುದುಂಟೇ? ಕೆಳಗಿಳಿ; ನಮ್ಮ ಮೇಲೆ ಸುಂಕ ಹೊರಿಸು" ಎಂದು ಹೇಳುತ್ತ ಮುಂದಕ್ಕೆ ಬಂದನು.

ಬಿಂಕದ ಬಲ್ಲಾಳನ ಹೆಸರು ಕೇಳುತ್ತಲೇ, ಸುಂಕದವನ ಬಾಯಿ ಒಣಗಿತು. ಅವನು ಬೆಳಕು ತರುತ್ತೇನೆಂದು ಹೇಳಿ, ಒಳಕ್ಕೆ ಹೋಗಿ. ಅಲ್ಲಿಂದಲೇ ತಲೆ ತಪ್ಪಿಸಿಕೊಂಡು ಓಡಿಹೋದನು.

ಕೋಟಿಚೆನ್ನಯರು ಪಡುಮಲೆ ಬಲ್ಲಾಳನ ಸೀಮೆ ಕಳೆದು, ರಾತ್ರಿ ಎಲ್ಲಿಯೂ ತಂಗದೆ, ದಾರಿ ನಡೆದು. ಎರಡು ಮೂರು ಗಳಿಗೆ ಹೊತ್ತು ಏರುವುದರೊಳಗೆ ಪಂಜಕ್ಕೆ ಬಂದು ಮುಟ್ಟಿದರು.

**ಎರಡನೆಯ ಭಾಗ**

## ಪಂಜದಲ್ಲಿ

ಪಡುಮಲೆ ಸೀಮೆಗೆ ಒಬ್ಬ ಬಲ್ಲಾಳನಿದ್ದಂತೆಯೇ ಪಂಜ ಸೀಮೆಗೂ ಒಬ್ಬ ಬಲ್ಲಾಳನಿದ್ದನು. ಇವನ ಹೆಸರು ಕೇಮರಬಲ್ಲಾಳ. ಇವನ ಬೀಡು ಪಂಜದಲ್ಲಿತ್ತು; ಆ ಕಾಲದಲ್ಲಿ ಪಂಜವು ದೊಡ್ಡ ಊರಾಗಿತ್ತು.

ಪಂಜದಲ್ಲಿ ಒಂದು ಮನೆ, ಮಾಳಿಗೆಯ ಮನೆ; ಎದುರು ಸಣ್ಣದೊಂದು ಹಂದರ, ಬಲಗಡೆ ಪದ್ಮಕಟ್ಟೆಯುಳ್ಳ ತೆಂಗಿನ ಮರ, ಎಡಗಡೆ ಏತಹಾಕಿದ ಬಾವಿ, ಹಿಂದುಗಡೆ ಜೋಡು ಹಟ್ಟಿಗಳು, ಅದರ ಮಗ್ಗುಲಲ್ಲಿ ಕೋಳಿಯ ಗೂಡು. ಕೋಟಿಚೆನ್ನಯರು ಈ ಮನೆಯ ಮುಂದಿನ ಅಡ್ಡಗಟ್ಟಿದ ಗುಜ್ಜು ತಡಮೆ ದಾಟಿ, ಬೇಲಿಯೊಳಕ್ಕೆ ಹೋಗಿ ನಿಂತು, "ಪಯ್ಯ ಪಯ್ಯ" ಎಂದು ಕರೆದರು.

ಒಳಗಿಂದ ಯಾರೂ ಓಯೆನ್ನಲಿಲ್ಲ. ಚೆನ್ನಯನು "ಓ ಪಯ್ಯ, ಪಯ್ಯ ಇಲ್ಲವೇ?" ಎಂದು ಗಟ್ಟಿಯಾಗಿ ಕೂಗಿದನು.

"ಯಾರದು ಕರೆಯುವುದು?" ಎಂಬುದಾಗಿ ಹೆಂಗಸಿನ ಸ್ವರವೊಂದು ಕೇಳಿಸಿತು.

ಕೋಟಿಯು-"ಯಾರೂ ಇಲ್ಲ; ನಾವು ಹಾದಿ ಪಯಣದ ಮಂದಿ. ಪಯ್ಯಬೈದ್ಯ ಇದ್ದಾನೋ?"

ಉತ್ತರ-"ಅವರಿಲ್ಲ."

ಪ್ರಶ್ನೆ-"ಎಲ್ಲಿ ಹೋಗಿದ್ದಾನೆ?"

ಉತ್ತರ-"ಬೈನಿ ಕಟ್ಟಲಿಕ್ಕೆ ಸಂಕಮಲೆಗೆ ಹೋಗಿದ್ದಾರೆ."

ಪ್ರಶ್ನೆ-"ಯಾವಾಗ ಬಂದಾನು?"

ಉತ್ತರ-“ಬೆಳಗ್ಗೆ ಹೋದರೆ, ಮಧ್ಯಾಹ್ನ ಬರುವರು. ಮಧ್ಯಾಹ್ನ ಹೋದರೆ ಸಂಜೆಗೆ ಬರುವರು.”

ಪ್ರಶ್ನೆ-“ಬರಲಿಕ್ಕೆ ಹೊತ್ತು ಆಗಲಿಲ್ಲವೇ?”

ಉತ್ತರ-“ಈಗಲೇ ಬಂದಾರು; ಕೂತುಕೊಳ್ಳಿ. ನೂಲು ಹಾಕಿದವರಾದರೆ ಕೆಂದಾಳೆಯ ಪದ್ಮಕಟ್ಟೆ ಇದೆ. ಒಕ್ಕಲಿಗರಾದರೆ ಬಡವರ ಚಪ್ಪರ ಇದೆ. ಜಾತಿಯವರಾದರೆ ಮೊಗಸಾಲೆಯಲ್ಲಿ ತೂಗುಯ್ಯಾಲೆ ಇದೆ.”

ಗಂಡಸರಿಲ್ಲದ ಮನೆಯೊಳಕ್ಕೆ ತಾವು ತಲೆಹಾಕುವುದು ಸರಿಯಲ್ಲವೆಂದು ಹೇಳಿ, ಕೋಟಿ ಚೆನ್ನಯರು ಚಪ್ಪರದಲ್ಲಿ ಹಾಸುಕಂಬಳಿಯನ್ನು ಬಿಡಿಸಿ ಬಿಟ್ಟು, ಅಲ್ಲೇ ಕುಳಿತುಕೊಂಡು, ಎಲೆಯ ಸಂಚಿಯನ್ನು ಬಿಚ್ಚಿ, ಬಾಯಿ ಕೆಂಪಗೆ ಮಾಡಿಕೊಂಡರು. ಆಗ ಚೆನ್ನಯನಿಗೆ ಅಡಕೆಯು ತಲೆಗೇರಿ, ಜೋಮು ಬಂತು. ಕೋಟಿಯು “ನಮಗೆ ಒಂದು ಗಿಂಡಿ ನೀರು ಬೇಕು” ಎಂದು ಗಟ್ಟಿಯಾಗಿ ಹೇಳಿದನು.

ಗಂಡಸರಿಲ್ಲದಿದ್ದಾಗ ಮನೆಯ ಹೊರಗೆ ತಾನು ತಲೆ ಹಾಕುವುದು ಸರಿಯಲ್ಲವೆಂದು ಮಾತಿನಿಂದ ಹೇಳಿದರೂ ಆ ಹೆಂಗಸು ತನ್ನ ಕೆಲಸದಿಂದ ತೋರಿಸಲಿಲ್ಲ. ಆಕೆಯು ಮಡಿಯುಟ್ಟು, ಕಲ್ಲು ಕಟ್ಟಿದ ಬಾವಿಗೆ ಹೋಗಿ, ನೀರು ತುಂಬಿದ ಬಿಂದಿಗೆಯನ್ನು ಹಿಡಿದುಕೊಂಡು ಹೊರಕ್ಕೆ ಬಂದಳು.

ಇಷ್ಟರಲ್ಲಿ ಚೆನ್ನಯನು ಮರವೆ ತಿಳಿದು, ಕೈಬಟ್ಟೆಯಿಂದ ಮೋರೆಯನ್ನು ಒರಸಿ ಕೊಳ್ಳುತ್ತಿದ್ದನು. ಹೆಂಗಸು ನೀರಿನ ಬಿಂದಿಗೆಯನ್ನು ಹೊಸ್ತಿಲ ಹೊರಗಿಟ್ಟು, ಬಾಗಿಲ ಹಿಂದುಗಡೆ ನಿಂತಳು. ಬಿಂದಿಗೆಯನ್ನು ನೋಡಿ ಅಣ್ಣನು ತಮ್ಮನ ಮುಖವನ್ನೂ, ತಮ್ಮನು ಅಣ್ಣನ ಮುಖವನ್ನೂ ದೃಷ್ಟಿಸುತ್ತ. ಇಬ್ಬರೂ ನೀರು ಮುಟ್ಟದೆ ಸುಮ್ಮನಿದ್ದರು. ಹೆಂಗಸು ಅದನ್ನು ಕಂಡು “ನೀರು ಮಡಗಿದ್ದೇನೆ” ಓಂದು ಹೇಳಿದಳು.

ಅದಕ್ಕೆ ಕೋಟಿಯು “ನಿನ್ನ ಕೈನೀರು ಕುಡಿಯಬೇಕಾದರೆ, ಹುಟ್ಟುಬುಡ ಹೇಳಬೇಕು; ಜಾತಿಕುಲ ತಿಳಿಯಬೇಕು” ಎಂದನು.

“ಅದಕ್ಕೇನು ಅಡ್ಡಿ? ಕಥೆ ಮಾತ್ರ ದೊಡ್ಡದಿದೆ. ಮನೆಯವರು ಬರಲಿಕ್ಕೂ ತಡ ಇದೆ” ಎಂದು ಉತ್ತರ ಬಂದಿತು.

ಅಷ್ಟರೊಳಗೆ ಅವಳ ಗಂಡನು ಕಳ್ಳು ಹೊತ್ತುಕೊಂಡು ಹಿತ್ತಿಲ ಕಡೆಯಿಂದ ಮನೆಗೆ ಬಂದದ್ದು ಆ ಹೆಂಗಸಿಗೆ ಗೊತ್ತಾಗಲೇ ಇಲ್ಲ. ಅವಳು ಪರಕೀಯರೊಡನೆ ಮಾತನಾಡುವುದನ್ನು ಅವನು ಕೇಳಿ, ಸಂಶಯದಿಂದ ಮನೆಯ ಬಲಗಡೆಯ ಗೋಡೆಯಲ್ಲಿ ಮರೆಯಲ್ಲಿ ನಿಂತುಕೊಂಡು ಇವರ ಮಾತುಕಥೆ ಕೇಳುತ್ತಾ ಇದ್ದನು.

ಚೆನ್ನಯ-“ಕಥೆ ಕೇಳೋಣ”.

ಹೆಂಗಸು- “ನಮ್ಮ ಅಜ್ಜಿ, ಅಂದರೆ ತಾಯಿಯ ತಾಯಿ ಬ್ರಾಹ್ಮಣತಿಯಂತೆ. ಅವಳು ತಕ್ಕ ಕಾಲದಲ್ಲಿ ಮದುವೆಯಾಗದೆ ದೊಡ್ಡವಳಾದುದರಿಂದ, ತಾಯಿತಂದೆಗಳು ತಮ್ಮ ಜಾತಿ ಕಟ್ಟಳೆ ಮೀರಲಾರದೆ, ಅವಳನ್ನು ಕಣ್ಣುಕಟ್ಟಿ ಕಾಡಿನಲ್ಲಿ ಬಿಟ್ಟರಂತೆ.”

ಕೋಟಿ-“ಆಮೇಲೆ...”

ಹೆಂಗಸು-”ಆಮೇಲೆ ಕಳ್ಳು ತೆಗೆಯಲು ತಾಳೇಮರವನ್ನು ಏರಿದ್ದ ಒಬ್ಬನು ಅವಳನ್ನು ಕಂಡು ಬೀಡಿಗೆ ಹೋಗಿ ಬಲ್ಲಾಳರಿಗೆ ತಿಳಿಸಿದನಂತೆ. ಅವರ ಅಪ್ಪಣೆಯಂತೆ ಅವನು ಆಮೇಲೆ ಅವಳನ್ನು ಮನೆಗೆ ಕೊಂಡುಹೋಗಿ, ಚೆನ್ನಾಗಿ ಸಾಕಿ, ಬರ್ಮಣ ಬೈದ್ಯನಿಗೆ ಮದುವೆ ಮಾಡಿ ಕೊಟ್ಟನಂತೆ”

ಕೋಟಿ-“ಕರ್ಗೋಲ ತೋಟದ ಬಿರ್ಮಣ ಬೈದ್ಯನಿಗೋ?”

ಹೆಂಗಸು-“ಹೌದು, ಹೌದು; ಕರ್ಗೋಲ ತೋಟ-ಆ ಹೆಸರೇ ಮರೆತುಹೋಗಿತ್ತು. ನನ್ನ ತಾಯಿ ಆ ಹೆಸರನ್ನು ಒಂದು ಸಲ ಹೇಳಿದ್ದು ನನಗೆ ಈಗ ನೆನಪಿಗೆ ಬಂತು.”

ಕೋಟಿ-“ತಾಯಿ ಯಾರು?”

ಹೆಂಗಸು-“ಬಿರ್ಮಣ ಬೈದ್ಯನ ಮಗಳೇ ನನ್ನ ತಾಯಿ.”

ಕೋಟಿ-“ತಾಯಿಯ ಹೆಸರೇನು?”

ಹೆಂಗಸು-"ದೇಯಿ."

ಕೋಟ-"ತಂದೆಯ ಹೆಸರು?"

ಹೆಂಗಸು-"ಕಾಂತಣ್ಣ"

ಕೋಟಿ-"ಮೂಲಸ್ಥಳ?"

ಹೆಂಗಸು-"ಕೆಮ್ಮಲಜೆಯ ಬ್ರಹ್ಮರ ಎಂದು ಹೇಳುವುದನ್ನು ಕೇಳಿದ್ದೇನೆ. ನಾನು ನೋಡಲಿಲ್ಲ."

ಕೋಟಿ-"ಒಬ್ಬ ತಾಯಿಗೆ ನೀವು ಎಷ್ಟು ಮಂದಿ ಮಕ್ಕಳು?"

ಹೆಂಗಸು-"ಚೊಚ್ಚಲಿಗೆ ನಾನಂತೆ. ನನ್ನ ಬೆನ್ನ ಹಿಂದೆ ನನ್ನ ತಾಯಿ ಅವಳಿ-ಜವಳಿ ಗಂಡುಮಕ್ಕಳನ್ನು ಬೀಡಿನ ಅರೆಯಲ್ಲಿ ಹೆತ್ತಳಂತೆ."

ಕೋಟಿ-"ಕರ್ಗೋಲ ತೋಟದವರಿಗೆ ಬೀಡಿನ ಅರೆಯಲ್ಲಿ ಹೆರಿಗೆಯಾಗಲು ಕಾರಣವೇನು?"

ಹೆಂಗಸು-"ಅದೋ? ಅದನ್ನು ಹೇಳುತ್ತೇನೆ. ಪಡುಮಲೆಯ ಪೆರುಮಾಳು ಬಲ್ಲಾಳರು ಇರುವರಷ್ಟೆ. ಅವರು ಒಂದು ಸಾರಿ ಬೇಟೆಗೆ ಹೋಗಿದ್ದಾಗ ಅವರ ಕಾಲಿಗೆ ಮುಳ್ಳು ತಾಗಿ ಜೀವ ಹೋಕುಬರ್ಕು ಎಂಬಂತಾಯಿತಂತೆ. ಆಗ ನನ್ನ ತಾಯಿ ತುಂಬಿದ ಬಸುರಿ. ಅವಳ ಮದ್ದು ಆಗಬಹುದೆಂದು ಅವಳನ್ನು ಬೀಡಿಗೆ ಕರೆತರಿಸಿದರಂತೆ. ಅವಳು ತಾನು ತುಂಬಿದ ಬಸುರಿ ಎಂಬುದನ್ನು ಲೆಕ್ಕಿಸದೆ ತಾನೇ ತನ್ನ ಕೈಯಿಂದ ಸೊಪ್ಪು ಅರೆದು, ಮೈಗೆ ಹಚ್ಚಿ ವಾಸಿ ಮಾಡಿದಳಂತೆ. ನಂತರ ಅವಳ ಹೆರಿಗೆಯು ಬೀಡಿನಲ್ಲಿಯೇ ನಡೆಯಿತಂತೆ. ಆ ಹೆರಿಗೆಯಲ್ಲಿ ಆಕೆ ಅವಳಿ ಜವಳಿ ಗಂಡುಮಕ್ಕಳನ್ನು ಹೆತ್ತಳಂತೆ."

ಕೋಟಿ-"ಅನಂತರ ಏನಾಯಿತು?"

ಹೆಂಗಸು-"ಮಕ್ಕಳು ಹುಟ್ಟಿದ ಮೂರು ತಿಂಗಳಲ್ಲಿಯೇ ಅವಳು ಕಾಲವಾದಳು."

ಕೋಟಿ-“ಅವಳ ಕಡೆಗಾಲದಲ್ಲಿ ಅವಳ ಹತ್ತಿರ ಯಾರೂ ಇರಲಿಲ್ಲವೇ?”

ಹೆಂಗಸು-“ನನಗೆ ಏಳು ವರ್ಷ ವಯಸ್ಸು ಅನ್ನುವಾಗ ನನ್ನನ್ನು ಇಲ್ಲಿಗೆ ತಂದು ಕೈ ಹಿಡಿಸಿಕೊಟ್ಟರು. ಅಂದಿನಿಂದ ನಾನು ಮನೆಬಿಟ್ಟು ಹೊರಕ್ಕೆ ಕಾಲು ಇಡಲಿಲ್ಲ. ಹೀಗಾದ್ದರಿಂದ ತಾಯಿ ಹೆತ್ತ ಸುದ್ದಿಯ ಸುಖವಾಗಲೀ, ಸತ್ತ ಗೋಳಿನ ದು:ಖವಾಗಲೀ, ಕಿವಿಯಿಂದ ಕೇಳಿದ್ದೇನೇ ಹೊರತು ಕಣ್ಣಿನಿಂದ ಕಾಣಲಿಲ್ಲ.”

ಕೋಟಿಚೆನ್ನಯರ ಮನಸ್ಸಿನಲ್ಲಿ ಉಲ್ಲಾಸದ ಏರ್ತವೂ, ಉದ್ವೇಗದ ಇಳಿತವೂ ತೋರಿ, ಅವರು ಒಬ್ಬರನ್ನೊಬ್ಬರು ನೋಡುತ್ತ ಒಂದು ನಿಮಿಷ ಸುಮ್ಮನಿದ್ದರು.

ಸ್ವಲ್ಪ ಹೊತ್ತಿನ ಮೇಲೆ “ಆ ಮಕ್ಕಳನ್ನು ಯಾರು ಸಾಕಿದರು?” ಎಂದು ಕೋಟಿಯು ಕೇಳಿದನು.

ಹೆಂಗಸು-“ಅನಂತರದ ಸಂಗತಿ ನನಗೆ ಬೇಡವಾಯಿತು. ಬಿತ್ತಿದ ಗದ್ದೆಗೆ ತೆವರಿ ಗಟ್ಟಿ ಇರಬೇಕು. ಹುಟ್ಟಿದ ಹೆಣ್ಣಿಗೆ ತವರು ಗಟ್ಟಿ ಇರಬೇಕು. ತಾಯಿ ಹೋದ ಮೇಲೆ ತವರು ಮನೆಗೆ ಹೋಗಲಿಲ್ಲ. ತಮ್ಮಂದಿರನ್ನು ಕಾಣಲಿಲ್ಲ. ಊರಿನವರು ಮಾತ್ರ ಅವರ ಪ್ರತಾಪವನ್ನು ಹೊಗಳುತ್ತಾರೆ. ನೀರಿನಿಂದ ಹುಟ್ಟಿದ ಬೆಂಕಿಯಂತೆ, ನೆಲದಿಂದ ಬಂದ ಸಿಡಿಲಂತೆ,-”

ಚೆನ್ನಯ-“ಅಕ್ಕಾ, ನಿನ್ನ ಹೆಸರು”

ಹೆಂಗಸು-“ನನ್ನ ಹೆಸರು ಕಿನ್ನಿದಾರು.”

ಕೂಡಲೇ ಕೋಟಿಚೆನ್ನಯರು ಎದ್ದು. “ಅಕ್ಕ ಎಂದರೆ ನೀನೇ ಸೈ, ತಮ್ಮ ಎಂದರೆ ನಾವೇ ಸೈ” ಎಂದು ಬಾಯಿಂದ ಹೇಳುತ್ತ, ಇಬ್ಬರು ಅವಳ ಪಾದದ ಮೇಲೆ ತಲೆಯಿಟ್ಟು ಅಡ್ಡಬಿದ್ದರು. ಆಗ ಗೋಡೆಯ ಹಿಂದುಗಡೆ ಅದುವರೆಗೆ ಅವಿತುಕೊಂಡಿದ್ದ ಆಕೆಯ ಗಂಡನು ಈಚೆಗೆ ಬಂದು “ಏಳಿ, ಏಳಿ” ಎಂದು ಹೇಳಿ, ಅವರನ್ನು ಬಲಗೈಯಿಂದ ಎತ್ತಿ, ಮೊಗಸಾಲೆಯ ತೂಗುಯ್ಯಾಲೆಯ ಮೇಲೆ ಕುಳ್ಳಿರಿಸಿದನು; ಕಿನ್ನಿದಾರುವಿಗಂತೂ ಆದ ಸಂತೋಷವೇ ಅಷ್ಟಿಷ್ಟಲ್ಲ. ಅವಳು ಹಸುವನ್ನು ಕರೆದು, ಹಾಲನ್ನು ಕಾಯಿಸಿ ತಂದು, ಅವರನ್ನು ಆದರಿಸಿದಳು. ಆ ದಿನ ಅಕ್ಕನ ಮನೆಯ ಅಕ್ಕಿಯ ಬಿಳಿಯನ್ನವೇನು, ಬೆಲ್ಲದ ಪಾಯಸವೇನು, ಹಲಸಿನ ಸುಟ್ಟವೆಯೇನು, ತುಪ್ಪದ ಒಗ್ಗರಣೆಯೇನು,

ಬೆಣ್ಣೆಯ ಮೊಸರೇನು, ಉಪ್ಪಿನ ಕಾಯಿಯೇನು? ಒಟ್ಟೇನು? ಅಡಿಗೆ ಆರೋಗಣೆಗಳು ಹಸಿಯದ ಹೊಟ್ಟೆಗೆ ಹಸಿವೆಯನ್ನು ಉಂಟು ಮಾಡಿದುವು.

ಈ ಪ್ರಕಾರವಾಗಿ ಕೋಟಿಚೆನ್ನಯರು ಪಂಜದಲ್ಲಿಯ ತಮ್ಮ ಅಕ್ಕನ ಮನೆಯಲ್ಲಿ ಸುಖವಾಗಿ ಕಾಲ ಕಳೆಯುತ್ತಿರಲು, ಆ ಸುದ್ದಿಯು ಪಂಜದ ಊರಲ್ಲೆಲ್ಲಾ ಮೆಲ್ಲಮೆಲ್ಲನೆ ಹರಡಿತು. ಅನೇಕರು ಬೈದ್ಯನ ಮನೆಗೆ ಹೋಗಿ, ಇವರ ಗಂಡುಸಿರಿಯ ಮುಖ, ಅಗಲದ ಎದೆ, ಸೆಣಕಲು ಮೈ, ಚಳಕದ ಕೈ ನೋಡಿ ತಮ್ಮಲ್ಲಿಯೇ ಬೆರಗುಗೊಂಡು ಹಿಂದೆರಳುತ್ತಿದ್ದರು. ಮೊತ್ತಮೊದಲು ಕೋಟಿಚೆನ್ನಯರು ಮನೆಬಿಟ್ಟು ಕದಲುತ್ತಿರಲಿಲ್ಲ. ಆದರೆ ಕ್ರಮೇಣ ಹೊರಗಿನ ಜನಗಳು ಆಗಾಗ ತಮ್ಮನ್ನು ಮನೆಗೆ ಬಂದು ನೋಡಿದಷ್ಟಕ್ಕೆ ಸಲುಗೆಯು ಒಬ್ಬಿಬ್ಬರ ಹತ್ತಿರ ಹೆಚ್ಚಾಗಲು, ಅವರು ಊರಲ್ಲಿ ತಲೆಯೆತ್ತಿ ತಿರುಗತೊಡಗಿದರು. ಈ ಸುದ್ದಿಯು ಪಂಜ ಸೀಮೆಯ ಅಧಿಕಾರಿಯಾದ ಕೇಮರ ಬಲ್ಲಾಳನ ಕಿವಿಗೂ ಮುಟ್ಟಿತು. ಅವರ ಬುದ್ಧಿಯ ಜಾಣ್ಮೆಯನ್ನೂ ಮೈಯ ಬಲ್ಪನ್ನೂ ಕೇಳಿ ಆತನ ಕಿವಿಗೆ ಮೊದಲು ಮೊದಲು ಬಹಳ ರುಚಿಯಾಯಿತು. ಕ್ರಮೇಣ ಆ ಹೊಗಳಿಕೆಯೇ ಕಹಿಯಾಗತೊಡಗಿತು. ಹಾಗೆ ಬಲ್ಲಾಳನ ಮನಸ್ಸು ತಿರುಗುವುದಕ್ಕೆ ಚೆಂದುಗಿಡಿ ಎಂಬ ಹೆಸರಿನವನೊಬ್ಬನು ಮುಖ್ಯ ಕಾರಣನಾಗಿದ್ದನು.

ಚೆಂದುಗಿಡಿಯೂ ಕೇಮರ ಬಲ್ಲಾಳನೂ ಒಂದೇ ಮಡಕೆಯಲ್ಲಿ ಉಂಡ ಉಂಡಾಡಿಗಳು; ಒಂದೇ ಹಟ್ಟಿಯಲ್ಲಿ ಹೋರಿದ ಹೋರಿಗಳು; ಒಂದೇ ಗರಡಿಯಲ್ಲಿ ಕಲಿತ ಕಲಿಬಂಟರು. ಚೆಂದುಗಿಡಿಯು ಹರೆಯದ ಜವ್ವನಿಗನಿದ್ದಾಗ, ಪಂಜದ ಮುದುಕ ಬಲ್ಲಾಳನು ಸತ್ತುಹೋದನು. ತರುವಾಯ ಕೇಮರ ಬಲ್ಲಾಳನಿಗೆ ಎಂಟು ಮಾಗಣೆಯವರು ಕೂಡಿ ಪಟ್ಟಕಟ್ಟಿದರು. ಪಟ್ಟ ಕಟ್ಟಿದ್ದೇ ತಡ, ಚೆಂದುಗಿಡಿಯ ಎರಡು ತೋಳುಗಳಲ್ಲಿ ಎಂಟು ತೋಳುಗಳು ಎದ್ದಂತಾಯಿತು. ಹಿರಿಯ ಬಲ್ಲಾಳನಿದ್ದಾಗ ಪಯ್ಯಬೈದ್ಯನು ಆತನ ಬಲಗೈಯಂತಿದ್ದು, ಬೀಡಿಗೆ ಬೇಕಾದವನಾಗಿದ್ದನು. ಚೆಂದುಗಿಡಿಗೆ ಮೀಸೆ ಮೂಡುವುದಕ್ಕೆ ಮುಂಚಿನಿಂದ ಆತನ ಕಣ್ಣು ಪಯ್ಯಬೈದ್ಯನ ಮಣೆಯ ಮೇಲೆ ಇತ್ತು. ಕೇಮರನು ಸೀಮೆಯ ಬಲ್ಲಾಳನಾಗಿ ಎರಡು ಮಳೆಗಾಲಗಳು ಕಳೆಯುವುದರೊಳಗೆ ಚೆಂದುಗಿಡಿಯು ಬೈದ್ಯನ ಮೇಲೆ ಇಲ್ಲದ ಸಲ್ಲದ ದೂರುಗಳನ್ನು ಹೊರಿಸಿ, ಅವನನ್ನು ಬೀಡಿನಿಂದ ಹೊರಡಿಸಿ, ಅವನಿದ್ದ ಸ್ಥಳದಲ್ಲಿ ತನ್ನ ಚಾಪೆಯನ್ನು ಬಿಡಿಸಿ, ಕಾಲುನೀಡಿ ಕುಳಿತುಕೊಂಡನು. ಬೈದ್ಯನು ಬೀಡಿನಿಂದ ದೂರವಾದರೂ, ಬಲ್ಲಾಳನಿಂದ ದೂರವಾಗಲಿಲ್ಲ. ಆತನು ತನ್ನ ತಂದೆಯ

ನೆಚ್ಚಿದ್ದ ಬಲ್ಬಂಟನೆಂಬ ಅಭಿಮಾನವು ಕೇಮರ ಬಲ್ಲಾಳನ ಮನಸ್ಸಿನಿಂದ ತೀರಾ ಮಾಸಿ ಹೋಗಲಿಲ್ಲ. ಈ ಅಭಿಪ್ರಾಯವನ್ನು ಬಲ್ಲಾಳನ ಮನಸ್ಸಿನಿಂದ ಹೇಗಾದರೂ ಕಿತ್ತುಬಿಟ್ಟು, ಇಬ್ಬರೊಳಗೆ ಪರಸ್ಪರ ವೈರವನ್ನು ತಂದು ಹೂಡಬೇಕೆಂದು ಚೆಂದುಗಿಡಿಯು ಸಮಯವನ್ನು ಸಾಧಿಸುತ್ತಿದ್ದನು. ಹೀಗೆ ಸಾಧಿಸುವುದಕ್ಕೂ ಕೋಟಿಚೆನ್ನಯರು ಆ ಬೈದ್ಯನ ಮನೆಯಲ್ಲಿ ಉಳಕೊಂಡದ್ದಕ್ಕು ಸರಿಯಾಯಿತು.

ಕೋಟಿಚೆನ್ನಯರು ಹಲವು ಕಾಲದಿಂದ ಪಯ್ಯಬೈದ್ಯನಲ್ಲಿ ಇದ್ದದ್ದು ಚೆಂದುಗಿಡಿಗೆ ಆಗಲಿಲ್ಲ. ಚೆಂದುಗಿಡಿಯು ಸ್ವಭಾವದಲ್ಲಿ ಅಂಜುಬುರುಕ; ಬೇರೊಬ್ಬರ ಎದೆಗಾರಿಕೆಯು ಅವನ ಕಣ್ಣಿಗೆ ಸೊಗಸದು. ಅವನು ಈ ಮೊದಲೇ ಚೆನ್ನಯನ ಕೈಯಾಟವನ್ನೂ, ಬಿಲ್ಲಿನ ಹೊಡೆತವನ್ನೂ, ಕೊಳಲಿನ ಜಾಣ್ಮೆಯನ್ನೂ ಕಂಡು ಬೆಚ್ಚಿ ಹೋಗಿದ್ದನು. ಅದೂ ಅಲ್ಲದೆ ತಾನು ಬೀಡಿನಿಂದ ಕೆಳಕ್ಕೆ ಕೆಡವಿಬಿಟ್ಟಿದ್ದ ಪಯ್ಯಬೈದ್ಯನು ಈಗ ಅರಸು ಕೊಂಬೆಯಲ್ಲಿ ತೊನೆದು ತೂಗುತ್ತಲಿದ್ದ ತನ್ನನ್ನು ಈ ಕೋಟಿಚೆನ್ನಯರ ಬಲ್ತೋಳಿನ ದೋಟಿಯಿಂದ ಎಳೆದು ಹಾಕಿ ನೆಲಕ್ಕೆ ಉದುರಿಸಿ ಬಿಡಲಿಕ್ಕಿಲ್ಲವೇ ಎಂಬೊಂದು ಹೆದರಿಕೆಯು ಚೆಂದುಗಿಡಿಯ ತಲೆಯನ್ನು ತಿನ್ನುತ್ತಲಿತ್ತು ಆದುದರಿಂದ ಆ ಮೂವರು-ಕೇಮರ ಬಲ್ಲಾಳ, ಪಯ್ಯ ಬೈದ್ಯ, ಕೋಟಿ-ಚೆನ್ನಯರು-ಪರಸ್ಪರ ಕೈಗೂಡಿರದೆ, ಮೂರು ಮೂಲೆಗಳಲ್ಲಿ ಮೂವರು ದೂರವಾಗಿರುವುದೇ ತನಗೆ ಮೇಲೆಂದು ಯೋಚಿಸಿ, ಚೆಂದುಗಿಡಿಯು ಕೇಮರ ಬಲ್ಲಾಳನು ಕೋಟಿ ಚೆನ್ನಯರನ್ನು ಕಣ್ಣು ತುಂಬ ನೋಡದಂತೆ ಹವಣಿಸುತ್ತಿದ್ದವು. ಆದರೆ ತನ್ನ ಮನಸ್ಸಿನಲ್ಲಿ ಇದ್ದುದನ್ನು ಮೋರೆಯಲ್ಲಾಗಲೀ ಮಾತಿನಲ್ಲಾಗಲೀ ತೋರಿಸುತ್ತಿರಲಿಲ್ಲ. ಇದು ಪಯ್ಯ ಬೈದ್ಯನಿಗೆ ಗೊತ್ತಾಗದೆ ಅವನು ದಿನಕ್ಕೆ ಒಂದು ಬಾರಿ "ನಮ್ಮ ಭಾವಂದಿರು ಬೀಡಿನ ಬಲ್ಲಾಳರನ್ನು ಓಲಗದಲ್ಲಿ ಕಾಣಬೇಕೆಂದಿದ್ದಾರೆ. ನೀವು ಭೇಟಿ ಮಾಡಿಸಬೇಕು" ಎಂದು ಚೆಂದುಗಿಡಿಯ ಹತ್ತಿರ ಪದೇ ಪದೇ ಕೇಳುವನು; ಚೆಂದುಗಿಡಿಯು "ಈ ಹೊತ್ತು, ನಾಳೆ, ಈ ಹೊತ್ತು, ನಾಳೆ" ಎಂದು ಒಂದಲ್ಲ ಒಂದು ನೆಪವನ್ನು ಹೇಳಿ, ಅವನ ಆಲೋಚನೆಯನ್ನು ಕಡಿದು ಹಾಕುವನು; ಬೈದ್ಯನು ಕೋಟಿಚೆನ್ನಯರಿಗೆ ಬಂದು ತಿಳಿಸಿ, "ಮುಂದೆ ನೋಡೋಣ?" ಎಂದು ಹೇಳುವನು; ಹೀಗೆ ಅನೇಕ ತಿಂಗಳುಗಳು ಕಳೆದುವು.

ಇತ್ತ ಪಡುಮಲೆಯಲ್ಲಿ ಪೆರುಮಾಳು ಬಲ್ಲಾಳನ ಕಣ್ಣಿನ ಮುಂದೆ ಕೋಟಿಚೆನ್ನಯರು ಗದ್ದಿಗೆಯ ಮೇಲೆ ಗಡುವಿಟ್ಟು ಯಾವ ದಿವಸ ಬೀಡಿನಿಂದ ಕೆಳಕ್ಕೆ ಇಳಿದು ಹೋದರೋ ಆ

ದಿನದಿಂದ ಬಲ್ಲಾಳನ ಮನಸ್ಸು ಒಂದುಕ್ಕೊಂದಾಗಿ ಹೋಯಿತು. ಅವನು ಮಾತುಮಾತಿಗೆ 'ಸತ್ತು. ಹೋಗಲಿ-ಸುಟ್ಟುಬಿಡಿ' ಎಂದು ಹೇಳುತ್ತ ಸಿಟ್ಟನ್ನು ಕಾರುತ್ತಿದ್ದನು. ಕೋಟಿಚೆನ್ನಯರನ್ನು ಸಿಕ್ಕಿದ್ದಲ್ಲಿ ಅವರನ್ನು ಹಿಡಿದು ಕೊಂದು ಹಾಕುವುದಕ್ಕೆ ಅವನ ಆಳುಗಳು ಹೋದರು. ಹೋದ ಆಳುಗಳು ಬೈದ್ಯನ ಮನೆಯನ್ನು ಸುಟ್ಟುಬಿಟ್ಟರು. ಆದರೆ ಕೋಟಿಚೆನ್ನಯರೂ ಸಾಯಿನ ಬೈದಿತಿಯೂ ಮನೆಯೊಳಗೆ ಇರಲಿಲ್ಲ; ಅವರು ಅಲ್ಲಿಂದ ಮೊದಲೇ ಕಾಲು ತೆಗೆದಿದ್ದರು. ಸಾಯಿನ ಬೈದಿತಿಯ ಗಂಡ ಸಾಯಿನ ಬೈದ್ಯನು ಮಾತ್ರ ಮನೆಯಲ್ಲೇ ಇದ್ದನು. ಆಳುಗಳು ಅವನನ್ನು ಹಿಡಿದು ತಂದು, ಬಲ್ಲಾಳನಿಗೆ ಒಪ್ಪಿಸಿದರು. ತಲೆ ತಪ್ಪಿಸಿಕೊಂಡವರು ಎಲ್ಲಿ ಓಡಿರಬೇಕೆಂಬುದನ್ನು ಅವನ ಬಾಯಿಂದ ಹೊರಡಿಸುವುದಕ್ಕೆ ಅವನಿಗೆ ನಾನಾ ಬಗೆಯಾಗಿ ಹಿಂಸೆ ಕೊಟ್ಟರು. ಹೀಗೆ ಚಿತ್ರಹಿಂಸೆ ಪಟ್ಟು ಕುಟುಕು ಜೀವದಲ್ಲಿದ್ದ ಆ ಮುದುಕನ ಸಂಕಟವನ್ನು ಕಂಡು ಬೀಡಿನ ರಾಣಿ "ಆ ಮುದುಕನನ್ನು ಯಾಕೆ ಹಿಂಸಿಸುತ್ತೀರಿ? ಅವನನ್ನು ಬಿಡಿ, ಅವನ ಗೋಳನ್ನು ಕೇಳಲಾರೆ" ಎಂದು ಹೇಳಲು ಅವನ ಬಿಡುಗಡೆಯಾಯಿತು. ಅಂದಿನಿಂದ ಮುದುಕನು ಮೊದಲಿನಂತೆಯೇ ಬೀಡಿನ ಒಳಗಿನವರಿಗೆ ಬೇಕಾದ ಕಳ್ಳನ್ನು ಒದಗಿಸಿಕೊಡುತ್ತ. ಅವರಲ್ಲಿ ವಿಶ್ವಾಸದಿಂದ ನಡೆದುಕೊಳ್ಳುತ್ತ ಬೀಡಿನ ಕೋಟೆಯ ಹೊರಗೆ ಹೋಗಲಿಕ್ಕೆ ಅಪ್ಪಣೆ ಇಲ್ಲದೆ ಅಲ್ಲಿಯೇ ಇದ್ದನು.

ಪೆರುಮಾಳು ಬಲ್ಲಾಳನ ಮನಸ್ಸು ಕೋಟಿಚೆನ್ನಯರ ಸಂಗತಿಯಿಂದ "ನೀರು ಸೋಕಿದರೆ ಬಿಸಿ, ಗಾಳಿ ಹಾಕಿದರೆ ಉರಿ" ಎಂಬಂತೆ ಹುಣ್ಣು ಹುಣ್ಣಾಗಿ ಹೋಯಿತು. ಗದ್ದಿಗೆಯಲ್ಲಿ ಗಡುವನ್ನು ಇಟ್ಟಿದ್ದು ನೆನಪಿಗೆ ಬರುತ್ತಲೇ ಅವನ ಮುಖವು ಬಾಡುವುದು; ಅವರು ಮರಳಿ ಬರಲಾರರೆಂದು ಯಾರಾದರೂ ಹೇಳಿದರೆ, ಅದು ಅರಳುವುದು. ಬೀಡಿನಲ್ಲಿ ಹುಟ್ಟಿದ ಮಕ್ಕಳು ಬೇಡಿ ತಿನ್ನಬೇಕಾಯಿತೇ ಎಂದು ನೆನೆದು ಅವರು ಎಲ್ಲಿದ್ದರೂ ಸರಿಯೇ ಅವರನ್ನು ಸಂಧಿ ಸಾಮಗಳಿಂದ ಮತ್ತೆ ಕರೆತರಿಸಿಕೊಳ್ಳಬೇಕು ಎಂದು ಒಮ್ಮೆ ಮರುಕದಿಂದ ಹೇಳುವನು. ಮತ್ತೊಮ್ಮೆ 'ದೂರದ ಮಾರಿ ದೂರಕ್ಕಿರಲಿ. ಕಿಚ್ಚಿನ ಕಿಡಿ ಎಂದು ಗೊತ್ತಿದ್ದು ಕಚ್ಚೆಯಲ್ಲಿ ಕಟ್ಟಕೊಳ್ಳುವುದೇಕೆ?' ಎಂದು ಹಾಗೆ ಸುಮ್ಮನಾಗುವನು. ಈ ಪ್ರಕಾರವಾಗಿ ಹೆದರಿಕೆಯ ಒಂದು ದಂಡಿಯು ಕತ್ತಿನಲ್ಲಿ ಕಟ್ಟಲ್ಪಟ್ಟು ಹಗೆಯ ಹಾದಿಯಲ್ಲಿ ಹಾಯ್ದು ಹಾಯ್ದು ಹೋಗಲರಿಯದ ಹೋರಿಯಂತೆ ಅವನ ಮನಸ್ಸು ಕ್ಷುಬ್ಧವಾಗಿ ಹೋಯಿತು.

ಹೀಗಿರಲು ಕೋಟಿಚೆನ್ನಯರ ಜಾಡು ಹಿಡಿದು ಅವರನ್ನು ಹುಡುಕಲು ಹೋದ ಬಲ್ಲಾಳನ ಬೀಡಿನವರಲ್ಲಿ ಒಬ್ಬನು ಹಳ್ಳಿಗಳನ್ನೆಲ್ಲಾ ಸುತ್ತಾಡಿ, ಅವರು ಪಂಜದ ಊರಲ್ಲೆ ಸೇರಿಕೊಂಡಿದ್ದಾರೆ ಎಂಬುದನ್ನು ಗೊತ್ತು ಮಾಡಿ, ಪಡುಮಲೆಗೆ ಹಿಂದೆರಳಿ, ಅವರ ಸೋವುಸುಳಿವುಗಳನ್ನು ತನ್ನ ಯಜಮಾನನಿಗೆ ತಂದುಕೊಟ್ಟನು. ಮರುದಿನವೇ ಬಲ್ಲಾಳನು ತನ್ನ ಸೇನಬೋವನನು ಚಾವಡಿಗೆ ಕರೆಯಿಸಿದನು.

ಆ ಸೇನಬೋವನು ಮುಂಜಾನೆಯ ಮುಂಬಿಸಿಲಿಗೆ ಹಾಕಿಸಿ ಸಂಜೆಯ ತಂಬಿಸಿಲಿಗೆ ತೆಗೆಯಿಸಿ, ಸರಿಗೊಳಿಸಿದ ತಾಳೆಯ ಗರಿಗಳ ಕಟ್ಟೊಂದನ್ನು ಕೈಯಲ್ಲಿ ಹಿಡಿದುಕೊಂಡು ಬಂದು ಬಲ್ಲಾಳನಿಗೆ ಕೈಮುಗಿದು "ಬುದ್ಧಿ" ಎಂದು ನಿಂತನು, ಬಲ್ಲಾಳನು "ಗುಟ್ಟಿನ ಕೆಲಸವಿದೆ. ಒಳಗಿನ ಕೊಟಡಿಗೆ ಬಾ" ಎಂದು ಹೇಳಿ, ಅವನನ್ನು ಏಕಾಂತದ ಕೋಣೆಗೆ ಕರೆದುಕೊಂಡು ಹೋದನು. ಸೇನಬೋವನು ಕೈಯಲ್ಲಿದ್ದ ಕಟ್ಟಿನಿಂದ ಒಂದು ಓಲೆಯನ್ನು ಈಚೆಗೆ ತೆಗೆದು, ಅದರ ಕಡೆಕುಡಿಗಳನ್ನು ಕತ್ತರಿಸಿ, ನಡುವಿನ ಉಬ್ಬನ್ನು ಸರಿಮಾಡಿ, ಎಣ್ಣೆಯನ್ನೂ ಅರಸಿನವನ್ನೂ ಪೂಸಿ, ಮೇಲೆ ಶ್ರೀಕಾರವನ್ನು ಗೀರಿ, ಬಲ್ಲಾಳನು ಹೇಳಿದ ಒಕ್ಕಣೆಯನ್ನು ಬರೆದು, ಓಲೆಯನ್ನು ಆತನ ಕೈಯಲ್ಲಿ ಕೊಟ್ಟನು. ಬಲ್ಲಾಳನು ಪತ್ರದ ಕೊನೆಯಲ್ಲಿ ಕಂಟದಿಂದ ಗೆರೆ ಗೀರಿ ಬೋವನಿಗೆ ಅದನ್ನು ತಿರುಗಿ ಕೊಟ್ಟು "ಇದನ್ನು ಪಂಜದ ಬಲ್ಲಾಳರಿಗೆ ಮುಟ್ಟಿಸಬೇಕು" ಎಂದು ಅಪ್ಪಣೆ ಮಾಡಿದನು. ಓಲೆಯನ್ನು ತೆಗೆದುಕೊಂಡು ಇಬ್ಬರು ಓಲೆಕಾರರು ಪಡುಮಲೆಯಿಂದ ಅದೇ ದಿನ ಹೊರಟರು.

ಇತ್ತ ಬಲ್ಲಾಳನು ಓಲೆಯನ್ನು ಬರೆಯಿಸುತ್ತಿದ್ದಾಗ, ಅತ್ತ ಚೆಂದುಗಿಡಿಯು ಮನೆಯ ಚಾವಡಿಯಲ್ಲಿದ್ದು ತನ್ನ ಮನಸ್ಸಿನಲ್ಲಿ "ಏನು ಮಾಡಿದರೂ ಕೋಟಿ ಚೆನ್ನಯರ ಹೆಸರೇ ಮೇಲೆ ಬರುತ್ತದಲ್ಲಾ! ಇವರ ಅದಟುತನದ ವಿಚಾರಗಳನ್ನು ಕೇಳಿ ಊರಲ್ಲಿದ್ದ ಮಕ್ಕಳಿಗೆ ಮದ್ದುಮಾಯೆ ಮಾಡಿದಂತಾಗಿದೆ; ಹೆಂಗಸರಿಗೆ ಮಂಕುಬೂದಿ ಹಾಕಿದಂತಾಗಿದೆ; ಮುದುಕರಿಗೆ ಅರಳು ಮರುಳು ಹಿಡಿದಂತಾಗಿದೆ. ಏನು ಮಾಡಿದರೂ ಈ ಬಿಲ್ಲರ ಕುಟ್ಟಿಗಳ ಹೆಮ್ಮೆ ಹಾರಾಟಗಳನ್ನು ನಿಲ್ಲಿಸುವುದಕ್ಕೆ ಆಗುವುದಿಲ್ಲವಲ್ಲಾ! ಇವರ ಸುದ್ದಿಯನ್ನು ನಾನು ಕಟ್ಟಿ ಕಟ್ಟಿ ಬಿಗಿದಷ್ಟೂ ಅದು ನನ್ನ ಕೈಮೀರಿ ಬಾಯಿಮಾಡುತ್ತದಲ್ಲಾ! ಎಲ್ಲಿ ಅವರು ನಮ್ಮ ಕೇಮರ ಬಲ್ಲಾಳನ ಎದುರಿಗೆ ಬಿದ್ದು ಅವನನ್ನು ಮರುಳು ಮಾಡಿ, ನನಗೆ ಅಪಾಯವನು ತಂದೊಡ್ಡುವರೋ ಗೊತ್ತಾಗುವುದಿಲ್ಲ! ಸಾಲದ್ದಕ್ಕೆ ನಮ್ಮ ಬಲ್ಲಾಳನಿಗೆ ಹಿತ್ತಾಳಿಯ ಕಿವಿ; ಕೆಸರು ಕಂಬದ ಮನಸ್ಸು; ಬಂಗಿಕೋರ ಬುದ್ಧಿ, ಯಾವ

ಉಪಾಯವೂ ಹೊಳೆಯುವುದಿಲ್ಲವಲ್ಲಾ!" ಎಂದು ಯೋಚಿಸುತ್ತಿದ್ದಾಗ ಬಲ್ಲಾಳನ ಜನ ಬಂದು "ಬುದ್ಧಿ, ಅಟ್ಟ ಅನ್ನದಲ್ಲಿ ಉಟ್ಟ ಉಡಿಗೆಯಲ್ಲಿ ಹೊರಟು ಬರಬೇಕೆಂದು ಅಪ್ಪಣೆಯಾಗಿದೆ" ಎಂದನು. ಚೆಂದುಗಿಡಿಯು ಮರುಮಾತನಾಡದೆ ಅಲ್ಲಿಂದ ಎದ್ದು ಕೇಮರನ ಬೀಡಿಗೆ ಹೋದನು.

ಕೇಮರಬಲ್ಲಾಳನು ಒಳಗಿನ ಅರೆಯಲ್ಲಿ ಹಾಸಿಗೆಯ ಮೇಲೆ ಕುಳಿತುಕೊಂಡಿದ್ದನು. ಚೆಂದುಗಿಡಿಯು ಬಂದು ಕೈಮುಗಿದು, ಕೈಕಟ್ಟಿ ನಿಂತನು. ಕೇಮರನೂ ಅವನಿಗೆ ಕುಳಿತುಕೊಳ್ಳಲು ಹೇಳಿ, ಮುಗುಳುನಗೆಯಿಂದ "ರಹಸ್ಯದ ಕಾರ್ಯ; ರಾಯಸ ಬಂದಿದೆ" ಎಂದನು.

ಚೆಂದುಗಿಡಿಯು "ಬುದ್ಧಿ" ಎಂದು ಗಂಟಲು ಹಿಸುಕಿದಂತೆ ಹೇಳಿ, ಮೊಳಕೈಗಳನ್ನು ಒರಸುತ್ತ "ಬುದ್ಧಿ" ಎಂದು ಸ್ವರ ಎತ್ತಿದನು. ಕೇಮರ ಬಲ್ಲಾಳನು "ನಮ್ಮ ಪಡುಮಲೆ ರಾಜನಿಂದ ಓಲೆ ಉಡುಗೋರೆ ಸಹಿತ ಆಳು ಬಂದಿದೆ. ಭಾರಿ ರಾಯಸ, ಕೋಟಿಚೆನ್ನಯರನ್ನು ಕುರಿತು ಬಲ್ಲಾಳನು ಬರೆಸಿದ್ದಾರೆ" ಎಂದು ಹೇಳಿ, ಓಲೆಯನ್ನು ಚೆಂದುಗಿಡಿಯ ಕೈಯಲ್ಲಿ ಕೊಟ್ಟನು.

ಚೆಂದುಗಿಡಿಯ ಎದೆಯು ಬಡೆಯತೊಡಗಿತು. ಅವನು ನಡುಗುವ ಕೈಗಳಲ್ಲಿ ಓಲೆಯನ್ನು ಹಿಡಿದು, ಒಮ್ಮೆ ಓದಿಕೊಂಡನು; ಒಮ್ಮೆ ಒಳಕ್ಕೆ ಸರಿದ ನಾಲಗೆಯನ್ನು ಈಚೆಗೆ ತೆಗೆದನು. ಅವನು ಅದನ್ನು ಇನ್ನೊಮ್ಮೆ ಚೆನ್ನಾಗಿ ಹಿಂದು ಮುಂದು ಮಗುಚಿ ನೋಡಿ, "ಬುದ್ಧಿ, ರಾಯಸದ ಒಕ್ಕಣೆ ಸರಿಯಿದೆ, ಬಾಳೆಯಾಗಿ ಬೆಳೆಸಿದ್ದು ತಾಳೆಯಾಗಿ ತಲೆಯನ್ನು ಜಜ್ಜಿತಲ್ಲಾ" ಎಂದನು.

ಕೇಮರ ಬಲ್ಲಾಳನು "ಓಲೆಯನ್ನು ಓದಬೇಕಾದ್ದಿಲ್ಲ. ಒಟ್ಟೇನು ತಿಳಿಸಿಬಿಡು" ಎಂದು ಹೇಳಿ, ತನ್ನ ಬೆಳ್ಳಿಯ ಕರಡಿಯೊಳಗಿಂದ ಒಂದು ಬಂಗಿಯ ಉಂಡೆಯನ್ನು ತೆಗೆದು ಮುಕ್ಕಿದನು.

ಚೆಂದುಗಿಡಿಯು ಇನ್ನೊಮ್ಮೆ ಓಲೆಯನ್ನು ಓದಿದಂತೆ ನಟಿಸಿ, "ಬುದ್ಧಿ" ಪಡುಮಲೆಯ ರಾಜ್ಯದಲ್ಲಿ ಬಲ್ಲವರಿಗೆ ಹುಟ್ಟದ ಕೋಟಿಚೆನ್ನಯರು ಮಲ್ಲಯ ಬುದ್ಧಿವಂತನನ್ನು ಕೊಂದು, ಭಾರಿ ಕೊಲೆ ಮಾಡಿ, ತಲೆ ಮರೆಸಿಕೊಂಡು ಓಡಿಹೋಗಿದ್ದಾರೆ. ಪಂಜದ ರಾಜ್ಯದಲ್ಲಿ ಕಾಲಿಟ್ಟರೆ ಅವರನ್ನು ಹಿಡಿದು ಕಳುಹಿಸಬೇಕು..."

ಕೇಮರ ಬಲ್ಲಾಳ-"ಇಲ್ಲದಿದ್ದರೆ..."

ಚೆಂದುಗಿಡಿ-“ಇಲ್ಲದಿದ್ದರೆ.-ಇಲ್ಲದಿದ್ದರೆ ಅವರನ್ನು ಇಲ್ಲೇ ಕೊಲ್ಲಿಸಬೇಕು” ಎಂದು ನಾಲಗೆ ಕಚ್ಚಿ ಹೇಳಿದನು. ಈ ಕಡೆಯ ಮಾತು ರಾಯಸದಲ್ಲಿ ಇರಲಿಲ್ಲ.

ಕೇಮರ ಬಲ್ಲಾಳ-“ಕಳುಹಿಸದಿದ್ದರೆ ಅವನು ಏನು ಮಾಡುತ್ತಾನಂತೆ?”

ಚೆಂದುಗಿಡಿ-“ಅವರನ್ನು ಹಿಂದಕ್ಕೆ ಕಳುಹಿಸಿಬಿಟ್ಟು, ಇಲ್ಲವೆ ಕೊಂದುಹಾಕಿ, ನಮ್ಮೊಳಗಿನ ಪೂರ್ವ ಸ್ನೇಹವನ್ನು ಬೆಳೆಸುವುದು; ನಮ್ಮ ಪಡುಮಲೆ ಬೀಡಿನ ಮಾನಮರ್ಯಾದೆಗಳನ್ನು ಕಾಪಾಡುವುದು-ಹೀಗೆ ಸಾಷ್ಟಾಂಗ ನಮಸ್ಕಾರ ಪೂರ್ವಕವಾಗಿ ಬರೆಯಿಸಿರುತ್ತಾರೆ.”

ಕೇಮರ ಬಲ್ಲಾಳ-“ಸರಿ, ಬೀಡಿನ ಗೌರವ ನಮಗೂ ಒಂದೇ, ಅವರಿಗೂ ಒಂದೇ, ಹಾಗಾದರೆ ಅವರ ಬೀಡಿನ ಮರ್ಯಾದೆಯನ್ನು ನಾವು ಕಾಯಬೇಕಷ್ಟೆ...”

ಚೆಂದುಗಿಡಿ- “ಬುದ್ಧಿ. ಅಪ್ಪಣೆಯಾದರೆ ನಾನು ಮಾಡುತ್ತೇನೆ.”

ಹೀಗೆ ಹೇಳಿ ಚೆಂದುಗಿಡಿಯು ಪಡುಮಲೆಯಿಂದ ಬಂದ ಓಲೆಯ ಒಕ್ಕಣೆಯಂತೆ ನಡೆಸತಕ್ಕ ಉಪಾಯಗಳನ್ನು ಬಲ್ಲಾಳನಿಗೆ ಸೂಚಿಸಿ, ಹೊತ್ತು ಮುಳುಗುವಷ್ಟರೊಳಗೆ ಬೀಡಿನಿಂದ ತನ್ನ ಮನೆಗೆ ಹಿಂದಿರುಗುತ್ತಿದ್ದನು.

ಆ ಹೊತ್ತಿಗೆ ಚೆಂದುಗಿಡಿಯ ಮನೆಯ ದಾರಿ ಹಿಡಿದು ಕೋಟಿಚೆನ್ನಯರೊಡಗೂಡಿ ಈಚೆಗೆ ಬರುತ್ತಿದ್ದ ಪಯ್ಯಬೈದ್ಯನು ಚೆಂದುಗಿಡಿಯನ್ನು ಕಂಡು, “ಅಯ್ಯಾ! ನಾವು ನಿಮ್ಮಲ್ಲಿಗೆ ಹೋಗುತ್ತಿದ್ದೆವು. ನಿಮ್ಮನ್ನು ಬೀಡಿಗೆ ಕರೆಯಿಸಿದ್ದಾರೆಂದು ಕೇಳಿ, ಈ ದಾರಿಯಾಗಿ...”

ಚೆಂದುಗಿಡಿಯು ಅವನನ್ನು ಮಾತು ಮುಗಿಸಲಿಕ್ಕೆ ಬಿಡದೆ. ಅವನ ಕೈಹಿಡಿದು, ಆ ಮೂವರನ್ನೂ ತನ್ನ ಮನೆಗೆ ಕರೆದುಕೊಂಡು ಹೋದನು. ಕೂಡಲೇ ಒಳಗಿನಿಂದ ಹಾಲಿನ ಗಿಂಡಿ, ಸಕ್ಕರೆಯ ತಬುಕು, ಕೆಂದಾಳೆ ಸೀಯಾಳ ಇವು ಬಂದು ಉಪಚಾರವಾಯಿತು; ಆದರೆ ಅವನ್ನು ಮಾತ್ರ ಯಾರೂ ಮುಟ್ಟಲಿಲ್ಲ. ತರುವಾಯ ವೀಳ್ಯದ ತಟ್ಟೆ ಬಂತು. ಪಂಚವಳ್ಳಿ ಹಸಿಯೆಲೆ, ಇಬ್ಭಾಗದ ಅಡಕೆಯ ಹೋಳು, ಬೆಣ್ಣೆಯಂಥ ಬಿಳಿಸುಣ್ಣ, ಸೂರತಿ ಹೊಗೆಸೊಪ್ಪು, ಪಯ್ಯನು ಎಲೆಯನ್ನು ಒರಸಿ, ಉಗುರಿಂದ ಕುಡಿಯನ್ನು ಚಿವುಟಿ, ನೆತ್ತಿಗೆ ಸುಣ್ಣ ಇಟ್ಟು ಸವರುತ್ತಿದ್ದಾಗ,

ಚೆಂದುಗಿಡಿಯು ಕಂಚಿನ ತಳಿಗೆಯನ್ನು ಅವನ ಪಕ್ಕದಲ್ಲಿ ಮಡಗಿ, "ನೀವು ಬಂದ ಕಾರ್ಯ ಗೊತ್ತಾಯಿತು" ಎಂದು ಮೊದಲು ಮಾಡಿದನು.

ಚೆನ್ನಯ-"ಗೊತ್ತಾಗುವುದಕ್ಕೆ ಆರು ತಿಂಗಳು ಹಿಡಿದರೆ, ಸಲಿಸುವುದಕ್ಕೆ ಎಷ್ಟು ಕಾಲ ಬೇಕಾಗುವುದೋ?"

ಕೋಟಿ-"ಅಯ್ಯಾ, ನಾವು ಬಲ್ಲಾಳರ ಭೇಟಿಯನ್ನು ನಿರೀಕ್ಷಿಸಿ ಬಹಳ ಕಾಲದಿಂದ ಹೆರವರ ಮನೆಯಲ್ಲಿ ಇದ್ದೇವೆ. ಒಮ್ಮೆ ಅವರ ದರುಶನವಾಯಿತೆಂದರೆ, ನಾವು ಇದುವರೆಗೆ ಕಾದುಕೊಂಡಿದ್ದ ಬೇಸರ ಹೋಗಿ ಬಿಡುತ್ತದೆ. ಬಲ್ಲಾಳರನ್ನು ನಿಮ್ಮ ಮೂಲಕವೇ ಕಾಣಬೇಕೆಂದು ನಮ್ಮ ಬಾವಯ್ಯನ ಅಭಿಪ್ರಾಯ."

ಪಯ್ಯಬೈದ್ಯ-"ಏನು ಹೇಳುತ್ತೀ, ಬಾವಾ? ನಮಗೆ ಬೇಕಾದಾಗ ಬಲ್ಲಾಳರು ನೋಡಸಿಗಲಿಕ್ಕೆ ಅವರೇನು ನಾವು ಕಟ್ಟುವ ತಾಳೆಯ ಮರವೋ? ಆಳ ನೋಡಿ ತೊರೆಯನ್ನು ದಾಟಬೇಕು. ವೇಳೆ ನೋಡಿ ದೊರೆಯನ್ನು ಕಾಣಬೇಕು; ಅರಸನ ಚಿತ್ತ, ಬೀಡಿನ ಸಂಗತಿ, ಅಲ್ಲವೆ ಚೆಂದುಗಿಡಿ?"

ಚೆನ್ನಯ-"ಇನ್ನಾದರೂ ಕಾಣುವುದಕ್ಕೆ ಇದೆಯೋ ಇಲ್ಲವೋ?"

ಚೆಂದುಗಿಡಿ-"ಅದಕ್ಕೇನು ಅಡ್ಡಿ?"

ಚೆನ್ನಯ-"ಹಾಗಾದರೆ, ಯಾವಾಗ?"

ಚೆಂದುಗಿಡಿ-"ನಾಳೆ"

ಪಯ್ಯಬೈದ್ಯ-"ನಾಳೆ ಸಂಕ್ರಾಂತಿ, ನಾಳೆ ಬೇಡ-ನಾಡದು ಆಗಬಹುದು."

ಚೆಂದುಗಿಡಿ-"ನಾಡದು ಸೋಮವಾರ-"

ಚೆನ್ನಯ-"ಎಷ್ಟು ಹೊತ್ತಿಗೆ?"

ಚೆಂದುಗಿಡಿ-"ಹಟ್ಟಿಯಿಂದ ಹೋದ ದನ ಬರುವುದರೊಳಗೆ."

ಕೋಟಿ-"ಆ ದಿನ ನಿಮಗೆ ಬಿಡುವು ಇದೆಯಷ್ಟೆ"

ಚೆಂದುಗಿಡಿ-"ಅದಕ್ಕೇನು ಅಡ್ಡಿ?"

ಇಷ್ಟಾದ ಮೇಲೆ ಚೆಂದುಗಿಡಿಯ ಮನೆಯಿಂದ ಮೂವರೂ ಹಿಂದೆರಳಿದರು. ದಾರಿಯಲ್ಲಿ ಚೆನ್ನಯನು "ಅಣ್ಣ. ಈ ಚೆಂದುಗಿಡಿಯನ್ನು ನೋಡಿದಾಗ ನಿನಗೆ ಯಾರ ನೆನಪಾಗುತ್ತದೆ?" ಎಂದು ಕೇಳಿದನು.

ಕೋಟಿ-"ಅವನು ಗಿಡುಗನ ಹಾಗೆ ಕಾಣುತ್ತಾನೆ."

ಚೆನ್ನಯ-"ಅವನ ಬಾಯಿ ನೆಗಳೆಯ ಬಾಯಿ, ನನಗೆ ಜೋಯಿಸರು ಹೇಳಿದ ನೆಗಳೆಯ ನೆನಪು ಬರುತ್ತದೆ-ಅಲ್ಲವೆ ಅಣ್ಣ?"

ಅಷ್ಟರಲ್ಲಿ ಮನೆಯು ಹತ್ತಿರವಾಯಿತು; ಮೂವರೂ ಒಳಗೆ ಹೋದರು.

ಸೋಮವಾರ ಸೂರ್ಯೋದಯವಾಯಿತು. ಕೋಟಿಚೆನ್ನಯರು ಹೊತ್ತು ನೆತ್ತಿಗೆ ಬರುವುದರೊಳಗೆ ಮುಂಗೈಗೆ ಮುಟ್ಟುವಂತೆ ಗಂಧವನ್ನು ಹಚ್ಚಿಕೊಂಡು, ಹಣೆ ತುಂಬುವಂತೆ ತುಳಸಿಕಟ್ಟೆಯ ಮೃತ್ತಿಕೆಯಿಂದ ನಾಮವನ್ನು ಎಳೆದುಕೊಂಡು, ತೊಡೆಯಗಲದ ಚಲ್ಲಣವನ್ನು ಉಟ್ಟು, ಬಲು ಉದ್ದದ ಪಟ್ಟೆಯ ದಟ್ಟಿಯನ್ನು ನಡುವಿಗೆ ಬಿಗಿದು, ಗಿಳಿಬಣ್ಣದ ಟೊಪ್ಪಿಗೆಯಿಂದ ತಲೆಯನ್ನು ಮುಚ್ಚಿ, ರಾಮಲಕ್ಷ್ಮಣ ಎಂಬ ಎರಡು ಕತ್ತಿಗಳನ್ನು ಕೈಯಲ್ಲಿ ಹಿಡಿದುಕೊಂಡು ಕೇಮರ ಬಲ್ಲಾಳನ ದರ್ಶನಕ್ಕಾಗಿ ಹೊರಟರು.

ಅವರು ದಾರಿಯನ್ನು ಸೇರುವುದರೊಳಗೆ ಪಯ್ಯಬೈದ್ಯನು ಕಲ್ಲೆಡವಿ ಬಿದ್ದು, ಬಿದ್ದರೂ ಬಿದ್ದಂತೆ ತೋರಿಸಿಕೊಳ್ಳದೆ ಮುಂದೆ ಹೋಗುವವರನ್ನು ಕುರಿತು 'ಒಂದು ಗಳಿಗೆ ತಡೆಯಿರಿ. ನನಗೆ ನಿನ್ನೆಯಿಂದ ಅಪಶಕುನಗಳೇ ಕಾಣುತ್ತವೆ. ರಾತ್ರಿ ಕೆಟ್ಟ ಕನಸು ಬಿತ್ತು. ಕರ್ಪದಲ್ಲಿ ಬಿದ್ದು ಹಾಡಿದ ಕಾಡಾನೆಯು ನನ್ನನ್ನು ಸೊಂಡಿಲಲ್ಲಿ ಹಿಡಿದು ನೆಲಕ್ಕೆ ಅಪ್ಪಳಿಸಿ ಬಿಟ್ಟಂತೆ ಕನಸಾಯಿತು. ಎಚ್ಚತ್ತು ಹೊರಬರುವಾಗ ಚೆನ್ನಯನು ನಿದ್ದೆಯಲ್ಲಿ "ಅಣ್ಣಾ, ಕೋಟಿ" ಎಂದು ಕನಿಕರದಿಂದ ಕೂಗಿದ್ದನ್ನು ಕೇಳಿದೆ. ಈಗ ದಾರಿಯಲ್ಲಿ ಕಾಲಿಡುವಾಗ ಕಾಲು ಮುಗ್ಗರಿಸಿತು. ಆದುದರಿಂದ ನೀವು ಈ ಕಂದಾಳೆಯ ಪದ್ಮಕಟ್ಟೆಯ ಮೇಲೆ ಕುಳಿತುಕೊಂಡು ಅಪಶಕುನವನ್ನು ಕಳೆಯಲೇಬೇಕು"

ಎಂದನು. ಹೀಗೆ ದುಶ್ಯಕುನಗಳನ್ನು ನಿವಾರಿಸಿಕೊಂಡು ಅವನು ಬೀಡನ್ನು ಮುಟ್ಟುವಾಗ ಹೊತ್ತು ಇಳಿಯಲಿಕ್ಕಾಯಿತು. ಆ ಇಳಿಹೊತ್ತಿನಲ್ಲಿ ಚೆಂದುಗಿಡಿಯ ಬೆನ್ನುಹಿಡಿದು, ರಾಜಾಂಗಣವನ್ನು ದಾಟಿ ಬರುತ್ತಿದ್ದ ಆ ವೀರಕುಮಾರರ ಬಳಿ ನಗುವಿನ, ನಗುಮೊಗದ, ಮೊಗಸಿರಿಯನು, ಸಿರಿಸಿಂಗಾರವನ್ನು ನೋಡುವುದಕ್ಕೆ ನೂರು ಕಣ್ಣು, ಬಣ್ಣಿಸುವುದಕ್ಕೆ ನೂರು ನಾಲಗೆ ಇದ್ದರೂ ಸಾಲದು.

ಅವರು ಚಾವಡಿಯ ಮೇಲೆ ಬರುವಷ್ಟರಲ್ಲಿ ಚೆಂದುಗಿಡಿಯು ಒಳಕ್ಕೆ ಹೋಗಿ ಒಂದು ನಿಮಿಷದಲ್ಲಿಯೇ ಹೊರಕ್ಕೆ ಬಂದು, “ಬೈದ್ಯರೇ, ನಿಮ್ಮ ಕಾರ್ಯವು ರಹಸ್ಯದಿದ್ದರೆ, ನಿಮ್ಮಿಬ್ಬರಿಗೆ ಮಾತ್ರ ಒಳಗೆ ಅಪ್ಪಣೆಯಾಗಿದೆ” ಎಂದು ಮೆತ್ತಗೆ ಹೇಳಿದನು.

ಅದಕ್ಕೆ ಕೋಟಿಯು “ಯಾವ ಗುಟ್ಟಾದರೂ ಬೀಡಿನಲ್ಲಿ ನಿಮ್ಮ ಕಿವಿಯ ಹೊರಗಲ್ಲವಷ್ಟೆ” ಎಂದನು.

ಚೆಂದುಗಿಡಿಯು “ಬಲ್ಲಾಳರ ಅಪ್ಪಣೆಯಂತೆ ನಡೆಯಬೇಕಾದದ್ದು ನನ್ನ ಕೆಲಸ, ಬಲ್ಲಾಳರಿಗೆ ಬೆಳಗ್ಗಿನಿಂದ ಮೈಯಲ್ಲಿ ಕೊಂಚ ಸರಿಯಿಲ್ಲವಂತೆ ಅದಕ್ಕೆ ನೀವಿಬ್ಬರೇ ಅವರನ್ನು ಹೋಗಿ ಕಾಣುವುದು ಮೇಲೆಂದು ನನಗೆ ತೋರುತ್ತದೆ. ಅದೇ-ಹೊಸದಾಗಿ ಕಟ್ಟಿಸಿದ ಮೇಲ್ಮಾಳಿಗೆ: ಅವರು ಅಲ್ಲಿಯೇ ಓಲಗವಾಗಿದ್ದಾರೆ. ನೀವು ಒಳಕ್ಕೆ ಹೋಗಿ; ನಾವು ಇಲ್ಲಿಯೇ ಕಾವಲು ಇದ್ದೇವೆ” ಎಂದು ಅವರಿಬ್ಬರನ್ನು ಒಡಂಬಡಿಸಿದನು.

ಕೋಟಿಚೆನ್ನಯರು “ಒಳಕ್ಕೆ ಹೋಗಿ, ಮಾಳಿಗೆಯ ಬೆಡಗು ಗೋಡೆಯ ಒತ್ತಿನಲ್ಲಿದ್ದ ಗದ್ದಿಗೆಯನ್ನು ಸಮೀಪಿಸುವಷ್ಟರಲ್ಲಿ ಅದರ ಮೇಲೆ ಅರೆ ಒರಗಿದ್ದವನೊಬ್ಬನು ಮೈಯಲುಗಿಸಿ, “ಬನ್ನಿ, ಇಲ್ಲೇ ಕುಳಿತುಕೊಳ್ಳಬಹುದು” ಎಂದು ಹೇಳಿ, ಹೂವಿನ ಚಾಪೆ ಹಾಸಿದ್ದ ಹಲಗೆಯನ್ನು ತೋರಿಸಿ, “ಹಸೆ ಇದೆ, ಕುಳಿತುಕೊಳ್ಳಿ, ಇದು ನಾವು ಕಟ್ಟಿಸಿದ ಹೊಸ ಮಾಳಿಗೆ - ಹೇಗಿದೆ?” ಎಂದು ತಾನೇ ಮಾತನ್ನು ಪ್ರಾರಂಭಿಸಿದನು.

ಅದಕ್ಕೆ ಚೆನ್ನಯ “ಬುದ್ಧಿ, ಕೇಳಬೇಕೆ? ಮಾಳಿಗೆ ಚನ್ನಾಗಿದೆ. ಬಳ್ಳಿಯಷ್ಟು ಬಾವು ಇಲ್ಲ, ಮೊಗ್ಗೆಯಷ್ಟು ಮೊನೆ ಇಲ್ಲ” ಎಂದನು.

ಕೋಟಿಚೆನ್ನಯರ ಕಣ್ಣುಗಳು ಗದ್ದಿಗೆಯ ಮೇಲೆಯೇ ಇದ್ದಾಗ, ಅವರ ಕಿವಿಯಲ್ಲಿ ಬಾಗಿಲಿನವನು ಬಾಗಿಲು ಮುಚ್ಚಿದ ಸದ್ದು ಬಿತ್ತು; ಕೀಲಿನವನು ಕೀಲು ಹಾಕಿದ ಶಬ್ದವು ಕೇಳಿಸಿತು. ಅವರಿಗೆ ತಾವು ಸೆರೆಬಿದ್ದೆವೆಂದು ಗೊತ್ತಾಯಿತು. ಕೋಟಿಯು "ತಮ್ಮಾ. ಹಾಲೆಂದು ಬಾಯಿಗೆ ಮುಟ್ಟಿಸುವಾಗ ಅದು ಕಳ್ಳಿನ ಹಾಲಾಯಿತಲ್ಲಾ! ದಿಂಬು ಎಂದು ಒರಗುವಷ್ಟರಲ್ಲಿ ಅದು ಮುಳ್ಳಿನ ಹಾಸಾಯಿತಲ್ಲಾ! ಹಾಸಿಗೆ ಎಂದು ನಂಬಿದ್ದು ಅಂಬು ಆಯಿತಲ್ಲಾ!" ಎಂದು ಕನಲಿದನು. ಗದ್ದಿಗೆಯ ಮೇಲೆ ಕುಳಿತವನು ಅವರನ್ನು ನೋಡಿ ನಕ್ಕನು. ಚೆನ್ನಯನು ಅವನನ್ನು ದೃಷ್ಟಿಸುತ್ತಾ "ಅಣ್ಣಾ! ಇವನು ಬಲ್ಲಾಳನಲ್ಲ. ನಿಜವಾಗಿಯೂ ಬಲ್ಲಾಳನಲ್ಲ. ನೀನು ಹೇಳಿದ್ದು ಸರಿಯೆ. ಬಲ್ಲಾಳನಿಗೆ ಗಿಳಿ ಮೂಗು, ಕುಡಿತೆ ಕಿವಿ, ಜಳ್ಳು ಹೊಟ್ಟೆ, ಅಂಡೆ ಕಾಲು ಎಂದು ಹೇಳುವುದನ್ನು ಕೇಳಿದ್ದೇನೆ. ಇವನ ಮೈಕಟ್ಟು ಗರಡಿಯಲ್ಲಿ ಆಟವಾಡಿದ ದೇಹದಂತಿದೆ. ಇವನು ಬಲ್ಲಾಳನಿಗೆ ಹುಟ್ಟಿದ..."

ಅಷ್ಟರಲ್ಲಿ ಗದ್ದಿಗೆಯ ಮೇಲಿದ್ದವನು ಚೆರ್ರನೆ ಚೀರಿ, ಕತ್ತಿಯನು ಜಳಪಿಸುತ್ತ ಕೆಳಕ್ಕೆ ಇಳಿದು ಮುಂದೆ ಬರುತ್ತಿದ್ದನು.

ಚೆನ್ನಯನ ಕಣ್ಣು ಅರಳಿತು. ಹಲ್ಲು ಕಡಿಯಿತು, ಸೊಳ್ಳೆ ತೆರೆಯಿತು. ಬಿಸಿಯುಸಿರು ಬುಸ್ಸೆಂದು ಹೊರಟಿತು. ಮೈಕೂದಲು ಜುಮ್ಮೆಂದು ಎದ್ದು ನಿಂತಿತು.

ಅದನ್ನು ಕಂಡು ಕೋಟಿಯು ಅವನ ಕೈ ಹಿಡಿದು "ಚೆನ್ನಯ ತಾಳು, ದುಡುಕಬೇಡ" ಎಂದು ಹೇಳಿ, ಕತ್ತಿ ಹಿರಿದು ತನ್ನ ಮುಂದೆ ನಿಂತವನನ್ನು ಗುರುತಿಸಿ, "ತಮ್ಮಾ ಇವನು ಬಲ್ಲಾಳನಲ್ಲ. ಬಲ್ಲಾಳನ ವೇಷದಲ್ಲಿ ಕುಳಿತಿದ್ದ ಅವನ ಬೀಡಿನ ಕೊಟ್ಟಾರಿ" ಎಂದು ಹೇಳಿ ಎದ್ದು ನಿಂತನು.

ಆದರೆ ಗದ್ದಿಗೆಯಿಂದ ಇಳಿದ ಕೊಟ್ಟಾರಿಯು ಕೋಟಿಚೆನ್ನಯರನ್ನು ಎದುರಿಸದೆ, ಬಡಗು ಗೋಡೆಯಲ್ಲಿದ್ದ ಬಾಗಿಲನ್ನು ಸರ್ರನೆ ತೆರೆದು, ಅದನ್ನು ದಾಟಿ, ತನ್ನ ಬೆನ್ನು ಹಿಂದೆಯೇ ಅದನ್ನು ಕೀಲಿಸಿ ಹೊರಕ್ಕೆ ಹೋದನು. ಕೂಡಲೇ ನಗಾರಿ ಬಡೆದಂತೆ ಡಬ ಡಬ ಶಬ್ದವಾಯಿತು.

"ಪಡುಮಲೆಯಿಂದ ಬಂದವರನ್ನು ಸಾಂಗವಾಗಿ ಕಂಡದ್ದಾಯಿತು. ಇನ್ನು ಇವರು ನಮ್ಮ ಬೀಡಿನಲ್ಲಿ ಯಾರ ತೊಂದರೆಯೂ ಇಲ್ಲದೆ ಬೇಕಾದಷ್ಟು ಕಾಲ ಸುಖವಾಗಿ ಇರಬಹುದು" ಎಂಬ ಮಾತುಗಳು ಆಚೆಯಿಂದ ಕೇಳಿಬಂದವು; ಧ್ವನಿಯು ಚೆಂದುಗಿಡಿಯ ದನಿ.

ಇಕ್ಕೆಡೆಯ ಬಾಗಿಲುಗಳೂ ಮುಚ್ಚಿಬಿಟ್ಟಿದ್ದ ಮೇಲ್ಮಾಳಿಗೆಯಲ್ಲಿ ಕೋಟಿಚೆನ್ನಯರು ಚಾಪೆಯೊಳಗೆ ಹಿಡಿದಿದ್ದ ಹಾವಿನಂತೆ ಬುಸುಗುಟ್ಟುತ್ತ. "ಅಯ್ಯೋ! ವಿಧಿಯೇ! ಇದು ಪಡುಮಲೆಯವರ ಹಗೆಯೋ? ಕೇಮರನ ಮೋಸವೋ? ನಮ್ಮ ಗ್ರಹಚಾರವೋ? ಮಳೆಗಾಲದಲ್ಲಿ ಮೋಡದ ಮೇಲೆ ಮೋಡವು ಕವಿಯುವಂತೆ ನಮ್ಮ ಮೇಲೆ ಆಪತ್ತಿನ ಮೇಲೆ ಆಪತ್ತು ಬರುತ್ತಿದೆಯಲ್ಲಾ! ನಮಗೆ ಸಾಯುವ ಕಾಲವು ಬಂತೇ? ಇದ್ದಾಗ ನಾವು ಓಲಗದ ಬಂಟರು; ಸತ್ತರೆ ವೈಕುಂಠದ ನಂಟರು. ನಾವು ಒಟ್ಟಿಗೆ ಹುಟ್ಟಿದೆವು. ಒಟ್ಟಿಗೆ ಬೆಳೆದೆವು; ಇನ್ನು ಒಟ್ಟಿಗೆ ಏಕೆ ಸಾಯಬಾರದು?" ಎಂದು- ನಾನಾ ಪ್ರಕಾರವಾಗಿ ಮರುಗುತ್ತಿದ್ದರು.

ನಡು ಇರುಳು ದಾಟಿ ಹೋಗಿ, ಚಂದ್ರನು ಮುಳುಗುವುದಕ್ಕಾದರೂ ಇಬ್ಬರೂ 'ಮುಂದೇನು ಗತಿ?' ಎಂದು ತಮ್ಮೊಳಗೇ ವಿಚಾರಿಸುತ್ತ: ಚೆಂಬಗಿಡಿಯ ಮೋಸವನ್ನು ನೆನೆಸುತ್ತಾ ಕಣ್ಣಿಗೆ ನಿದ್ದೆ ಬಾರದೆ ಕುಳಿತು ಕೊಂಡಿದ್ದರು. ಅಷ್ಟೊತ್ತಿಗೆ ಅಸ್ತಕ್ಕೆ ಹೋಗುವ ಚಂದ್ರನು ಆ ಮಾಳಿಗೆಯ ಒಂದು ಸಣ್ಣ ಕಿಟಕಿಯೊಳಗಿನಿಂದ ಇವರಿಬ್ಬರನ್ನೂ ಇಣುಕಿ ನೋಡಿ, ಕೆಳಕ್ಕೆ ಇಳಿದನು. ಚೆನ್ನಯನು ಕಿಟಕಿಯನ್ನು ನೋಡಿ, "ಅಣ್ಣಾ, ನನ್ನನ್ನು ಒಂದು ನಿಮಿಷ ನಿನ್ನ ಹೆಗಲಮೇಲೆ ಹೊತ್ತುಕೊಂಡರೆ, ನಾವು ಇಲ್ಲಿಂದ ತಪ್ಪಿಸಿಕೊಳ್ಳಬಹುದು" ಎಂದನು.

ಕೋಟಿಯ ಮೊಣಕಾಲೂರಿ, ತಮ್ಮನನ್ನು ಹೆಗಲಮೇಲೆ ಹತ್ತಿಸಿ ಎದ್ದುನಿಂತನು. ಹಾಗೆ ನಿಲ್ಲಲು, ಚೆನ್ನಯನ ಕೈಗಳಿಗೆ ಆ ಚಿಕ್ಕ ಕಿಟಕಿಯು ಎಟುಕಿತು. ಕೂಡಲೇ ಅವನು ಅದನ್ನು ಬಲವಾಗಿ ನೂಕಿ ಅಗಲಿಸಲಿಕ್ಕೆ ಯತ್ನಿಸಿದನು. ಕಿಟಕಿಯು ಸ್ವಲ್ಪ ಅಲುಗಾಡಿದಂತೆ ತೋರಿತು. ಚೌಕಟ್ಟನ್ನು ಹಿಡಿದು ಎರಡೂ ಕೈಗಳಿಂದ ಜಗ್ಗಿಸತೊಡಗಿದನು. ಕ್ರಮೇಣ ಚೌಕಟ್ಟು ಸಡಿಲಾಗುತ್ತಾ, ಕೊನೆಗೆ ಗೋಡೆಯಿಂದ ಎದ್ದುಬಂದಿತು. ಚೆನ್ನಯನು ಅದನ್ನು ಸದ್ದಿಲ್ಲದೆ ಹೊರಕ್ಕೆ ಎಳೆದು, ಮೆಲ್ಲನೆ ಕೆಳಗಿಳಿಸಿದನು. ಕಿಟಕಿ ಇದ್ದೆಡೆಯಲ್ಲಿ ಗೋಡೆಯೊಳಗೆ ಸಾಕಷ್ಟು ದೊಡ್ಡ ಕಂಡಿ ಬಿಟ್ಟುಕೊಂಡಿತು. ತರುವಾಯ ಅಣ್ಣತಮ್ಮಂದಿರು ತಮ್ಮ ನಡುವಿಗೆ ಬಿಗಿದುಕೊಂಡಿದ್ದ ದಟ್ಟಿಗಳನ್ನು ಬಿಚ್ಚಿ, ಅವೆರಡನ್ನೂ ಉದ್ದದ ಒಂದೇ ದಟ್ಟಿಯಾಗುವಂತೆ ಗಂಟಿಕ್ಕಿ, ಅದನ್ನು ಇಕ್ಕೆಡೆಗಳಿಂದ ಚೆನ್ನಾಗಿ ಎಳೆದು ನೋಡಿದರು. ಈ ಉದ್ದದ ದಟ್ಟಿಯ ಒಂದು ತುದಿಯನ್ನು ಚೆನ್ನಯನು ಕೈಯಲ್ಲಿ ತೆಗೆದುಕೊಂಡನು. ದಟ್ಟಿಯ ಬಹುಭಾಗವನ್ನು ಕೋಟಿಯು ನೆರಿಗೆನೆರಿಗೆಯಾಗಿ ಕಟ್ಟಿಕೊಂಡನು. ಈಗ ತಮ್ಮನು ಅಣ್ಣನ ಹೆಗಲನ್ನು ಮತ್ತೊಮ್ಮೆ ಏರಿ, ಗೊಡೆಯಲ್ಲಿದ್ದ ಆ ಸಂದಿನಿಂದ ಮೈಯನ್ನು ತೂರಿಸಿಕೊಂಡು,

ದಟ್ಟಿಯ ತುದಿಯನ್ನು ಕೈಯಲ್ಲಿ ತೆಗೆದುಕೊಂಡು ಹೊರಕ್ಕೆ ಬಂದನು. ಒಳಗಿನಿಂದ ಕೋಟಿಯು ದಟ್ಟಿಯ ಭಾಗವನ್ನು ಬಿಡುವಷ್ಟಕ್ಕೆ ಚೆನ್ನಯನು ತನ್ನ ಕಾಲುಗಳನ್ನು ಒಂದೊಂದಾಗಿ ಗೋಡೆಗೆ ಅನಿಸಿಕೊಂಡು ಆ ದಟ್ಟಿ ಹಿಡಿದು ಮೀಟುತ್ತಾ ಮೀಟುತ್ತಾ ಕೆಳಕ್ಕೆ ಇಳಿದನು. ಆಗ ಚೆನ್ನಯನು ಅದನ್ನು ಕೆಳಗಿನಿಂದ ಎಳೆಯುವಷ್ಟಕ್ಕೆ ಒಳಗಿದ್ದ ಕೋಟಿಯ ಅದನ್ನು ಸೆಳೆದು ಸೆಳೆದು ಗೋಡೆಯನ್ನು ಹತ್ತುತ್ತ ಕಿಟಕಿಯ ಕನ್ನವನು ಮುಚ್ಚಿದನು; ಅನಂತರ ಆ ದಟ್ಟಿಯ ತುದಿಯನ್ನು ಮಾಳಿಗೆಯ ಮಾಡಿನ ಮರದ ಅಡ್ಡಕ್ಕೆ ಕಟ್ಟಿ, ಅದನ್ನು ಇಳೀಬಿಟ್ಟು, ಅದರ ಆಧಾರದಿಂದ ಮೆಲ್ಲನೆ ಕೆಳಕ್ಕೆ ಬಂದು ತಮ್ಮನನ್ನು ಸೇರಿಕೊಂಡನು. ಇಷ್ಟರಲ್ಲಿ ಚಂದ್ರನು ಮುಳುಗಿ ಕತ್ತಲು ಇನ್ನೂ ಕಪ್ಪಾದಂತೆ ಕಾಣಿಸಿತು. ಗುಂಡಿಯೊಳಗಿಂದ ತಪ್ಪಿಸಿಕೊಂಡು ಕತ್ತಲಿನ ಕಾಡೊಳಗೆ ನುಗ್ಗಿಕೊಳ್ಳುವ ಸೊಕ್ಕಾನೆಗಳಂತೆ ಅವರಿಬ್ಬರು ಆ ಕಾಳ್ಗತ್ತಲಲ್ಲಿ ಅಲ್ಲಿ ಬಿದ್ದು ಇಲ್ಲಿ ಬಿದ್ದು ಬೆಳಕು ಹರಿಯುವಷ್ಟರೊಳಗೆ ಪಂಜದಿಂದ ಮಾಯವಾದರು.

ಮರುದಿನ ಬೆಳಗ್ಗೆ ಕೋಟಿಚೆನ್ನಯರ ಪಲಾಯನದ ಸಮಾಚಾರವು ಚೆಂದುಗಿಡಿಗೆ ಗೊತ್ತಾಯಿತು. ಅವನು ಅದನ್ನು ಕೇಮರ ಬಲ್ಲಾಳನ ಕಿವಿಗೆ ಹಾಕದೆ ಅವರಿಬ್ಬರೂ ಸೆರೆಯಲ್ಲಿಯೇ ಇದ್ದಾರೆ ಎಂಬಂತೆ ಸುದ್ದಿಯನ್ನು ಅರಹಿದನು. ತನ್ಮಧ್ಯೆ ಆಳುಗಳನ್ನು ಗುಟ್ಟಾಗಿ ಕಳುಹಿಸಿ ಮನೆಮನೆಗಳಲ್ಲಿ ಹುಡುಕಿಸಿದನು. ಆದರೆ ತಪ್ಪಿಸಿಕೊಂಡು ಹೋದ ಕೋಟಿಚೆನ್ನಯರು ತಪ್ಪಿಯೇ ಹೋದರು. ಪಂಜದ ಜನಗಳಿಗೆ ಗೊತ್ತಾಗಲೇ ಇಲ್ಲ.

**ಮೂರನೆಯ ಭಾಗ**

## ಎಣ್ಮೂರಲ್ಲಿ

ಪಂಜವನ್ನು ಬಿಟ್ಟ ಕೋಟಿಚೆನ್ನಯರು ಎಣ್ಮೂರು ಸೀಮೆಯ ದಾರಿ ಹಿಡಿದರು. ಮುಂಚಿನ ಕಾಲದಲ್ಲಿ ಪಂಜದಿಂದ ಎಣ್ಮೂರಿಗೆ ಹೋಗುವವರು ಬಳಸು ದಾರಿಯನ್ನು ಹಿಡಿಯಬೇಕಾಗಿತ್ತು. ಈಗ ಇವರು ದಾರಿಯುದ್ದಕ್ಕೆ ಆ ಕಾಲದಲ್ಲಿ ದಟ್ಟಡವಿ ಬೆಳೆದು ಹುಲಿಗಳು ಹೊಂಚುಹಾಕುವ ಕುರುಚುಕಾಡಿನಂತೆಯೂ, ಆನೆಗಳು ಅಲೆಯುವ ಆಟದ ಬೈಲಿನಂತೆಯೂ ಇತ್ತು. ಸುಮಾರು ಎರಡು ಮೈಲು ಅಗಲಕ್ಕೆ ಮರಗಳಿಂದ ಕಿಕ್ಕಿರಿದಿದ್ದ ಈ ಅಡವಿಯನ್ನು ಹಗಲು ಹೊತ್ತಿನಲ್ಲಿ ಕೂಡ ದಾಟುವುದಕ್ಕೆ ಜನರು ಹೆದರುತ್ತಿದ್ದರು. ಈ ಕಾಡೇ ಪಂಜ ಸೀಮೆಗೂ ಎಣ್ಮೂರು ಸೀಮೆಗೂ ಗಡಿಯಾಗಿದ್ದ ತುಪ್ಪೆಕಲ್ಲಿನ ಕಾಡು; ಈ ಸೀಮೆಗಳ ಮೇಲೆ ಬಲ್ಲಾಳರಿಗೆ ವಾದವಿವಾದಗಳು ಆಗಾಗ ಬರುತ್ತಿದ್ದುವು. ಅಡವಿಯ ಮೂಡುಗಡೆಯಲ್ಲಿ ಈಗ ಪಾಳುಬಿದ್ದಿರುವ ಅಯ್ಯನೂರ ಬೈಲಿಗಾಗಿ ಇಬ್ಬರೂ ಹೊಡೆದಾಡುತ್ತಿದ್ದರು. ತಲೆ ತಪ್ಪಿಸಿಕೊಂಡ ಕೋಟಿಚೆನ್ನಯರು ಈ ಬೈಲಿನ ಹತ್ತಿರದ ಅಡವಿಯಲ್ಲಿ ಅವಿತು, ಕೆಲವು ದಿನಗಳ ತನಕ ತಮ್ಮ ಪ್ರಾಣವನ್ನು ಕಾಪಾಡಿಕೊಂಡಿದ್ದರು.

ಪಡುಮಲೆಯ ಕೋಟಿಚೆನ್ನಯರ ಸಮಾಚಾರವು ಇದಕ್ಕಿಂತ ಮೊದಲೇ ಎಣ್ಮೂರಲ್ಲಿ ಹಬ್ಬಿತ್ತು. ಅವರು ಪೆರುಮಾಲ್ ಬಲ್ಲಾಳನ ಗದ್ದಿಗೆಯಲ್ಲಿ ಗಡು ಇಡುವುದಕ್ಕೆ ಮುಂಚಿತವಾಗಿಯೇ ಅದರ ಸಾಕು ತಾಯಿ ಸಾಯಿನ ಬೈದಿತಿಯು ಪಡುಮಲೆಗೆ ಬೆನ್ನು ಹಾಕಿ ಎಣ್ಮೂರಿಗೆ ಹೊರಟು ಬಂದು, ತನ್ನ ಮೂರದ ಸಂಬಂಧಿಕರೊಬ್ಬರಲ್ಲಿ ಉಳಿದುಕೊಂಡಿದ್ದಳು. ಕೋಟಿಚೆನ್ನಯರ ಪ್ರತಾಪವನ್ನು ಇವಳ ಬಾಯಿಂದ ಕೇಳಿ ನೆಂಟರಿಷ್ಟರೂ ಜಾತಿ ಮತಸ್ಥರೂ ಬಹಳ ಹೆಚ್ಚಳಪಡುತ್ತಿದ್ದರು. ಅವರಿಬ್ಬರ ಮೇಲಿದ ಈ ಹೆಚ್ಚಳವು ಆ ವೀರರ ಶೌರ್ಯ ಸಾಹಸಗಳ ಹೊಗಳಿಕೆಯು ಹರಡಿದ ಹಾಗೆಲ್ಲ ಭಯಭರಿತ ಭಕ್ತಿಯಾಯಿತು. 'ಹಿಂದೆ ಹುಟ್ಟಿಲ್ಲ, ಮುಂದೆ ಹುಟ್ಟಲಿಕ್ಕಿಲ್ಲ' ಎಂಬಂತಿದ್ದ ವೀರರಿಬ್ಬರನ್ನು ಎಣ್ಮೂರಿನ ಬಿಲ್ಲವರು ಕ್ರಮೇಣ ತಮ್ಮವರೆಂಬ ವಿಶ್ವಾಸದಿಂದ ಭಾವಿಸತೊಡಗಿದರು. ಹೀಗೆ ಕೋಟಿಚೆನ್ನಯರ ಮಾತು ಎಣ್ಮೂರಲ್ಲಿ ಜಾತಿ ಪ್ರಸಂಗವಾಯಿತು. ಕೇಮರ ಬಲ್ಲಾಳನು ಅವರನ್ನು ಮೋಸದಿಂದ ಹಿಡಿದು ಸೆರೆಯಲ್ಲಿ

ಇಟ್ಟಿದ್ದಾನೆಂಬ ಸುದ್ದಿಯಿಂದ ಬಿಲ್ಲರ ಉಡಿಯಲ್ಲಿ ಬೆಂಕಿಯ ಕಿಡಿ ಬಿದ್ದಂತಾಗಿ, ಅವರೆಲ್ಲರೂ ನಿಂತಲ್ಲಿನಿಲ್ಲದೆ ಎಣ್ಮೂರು ಬಲ್ಲಾಳನಿದ್ದಲ್ಲಿಗೆ ಹೋಗಿ, ಕೋಟಿಚೆನ್ನಯರನ್ನು ಅವರ ತಲೆ ಹೂಬಾಡದಂತೆ ನೋಡಿಕೊಂಡು ಅವರನ್ನು ಕೂಡಲೇ ಕಳುಹಿಸಿ ಕೊಡಲು ಕೇಮರಬಲ್ಲಾಳನಿಗೆ ಪತ್ರ ಬರೆಯ ಬೇಕೆಂಬುದಾಗಿಯೂ, ಆತನು ಅದಕ್ಕೇ ಒಪ್ಪದಿದ್ದರೆ ಆತನ ಸೀಮೆಯನ್ನು ಒಳನುಗ್ಗಿ ಕೋಟಿಚೆನ್ನಯರನ್ನು ಬಿಡಿಸಿಕೊಂಡು ಎಣ್ಮೂರಿಗೆ ತರುವಂತೆ ತಮಗೆ ಅಪ್ಪಣೆ ಕೊಡಿಸಬೇಕೆಂಬುದಾಗಿಯೂ ಆರಿಕೆ ಮಾಡಿಕೊಂಡರು. ಎಣ್ಮೂರು ಬಲ್ಲಾಳನು ಬಿಲ್ಲರ ಬಿನ್ನಹವನ್ನು ಕಿವಿಗೊಟ್ಟು ಕೇಳಿ, ತನ್ನ ಕಡೆಯ ಕಿನ್ನಿ ಚೆನ್ನಯನೆಂಬುವನನ್ನು ಕರೆದು, “ಕೋಟಿ ಚೆನ್ನಯರನ್ನು ಸಂಧಿ ಮಧ್ಯಸ್ಥಿಕೆಯಿಂದ ಕರೆದುಕೊಂಡು ಬರುವಂತೆ ಪ್ರಯತ್ನಿಸು” ಎಂದು ಅಪ್ಪಣೆ ಮಾಡಿ ಅವನನ್ನು ಒಂದಾನೊಂದು ದಿನ ಪಂಜಕ್ಕೆ ಕಳುಯಿಸಿದನು.

ಆ ದಿನ ಮಧ್ಯಾಹ್ನ ಕೋಟಿಚೆನ್ನಯರು ತಾವು ಅಡಗಿಕೊಂಡಿದ್ದ ತುಪ್ಪೆಕಲ್ಲು ಅಡವಿಯಿಂದ ಹೊರ ಬಿದ್ದು ಮುಂದಿನ ದಾರಿಯನ್ನು ಹುಡುಕಿಕೊಂಡು ಅಲೆಯುತ್ತಿರಲು, ಚೆನ್ನಯನು ತಟ್ಟನೆ ನಿಂತುಕೊಂಡು, ಅಣ್ಣಾ ಇದೋ ಗಡಿಕಲ್ಲು; ಪಂಜ ಹಿಂದಕಾಯಿತು, ಇದು ಎಣ್ಮೂರು” ಎಂದನು.

ಆಗ ಕೋಟಿಯು “ನನಗೆ ಬರಹ ಇಲ್ಲ. ಮೊದಲು ಹುಟ್ಟಿ ನೆಟ್ಟಗೆ ಬೆಳೆಯಲಿಕ್ಕೆ ನಾನಾದೆ; ಬುದ್ಧಿ ಕಲಿಯಲಿಕ್ಕೆ ನೀನಾದೆ. ಕಲ್ಲು ಬರಹ ಓದು” ಎಂದನು.

ಚೆನ್ನಯನು ಮೊಳಕಾಲೂರಿ, ಗಡಿಕಲ್ಲಿನ ಬರಹವನ್ನು ಓದಿ ಹೇಳಿದನು.

ಕೋಟಿಯು “ಹೌದು, ಚೆನ್ನಯ-ನೀನು ಓದಿದಂತೆ ಎಲ್ಲವೂ ಈಗ ನಡೆಯುತ್ತಲಿದೆ. ಮುಂಚಿನ ಕಾಲದಲ್ಲಿ ಎಣ್ಮೂರು ಬಲವಾಗಿತ್ತು; ಪಂಜದ ಹಣಕಾಸೆಲ್ಲಾ ಎಣ್ಮೂರಿಗೆ ಹೋಗುತ್ತಿತ್ತು. ಈಗ ಎಣ್ಮೂರು ಪಂಜದವರು ಜಗಿದುಬಿಟ್ಟ ಕಬ್ಬಿನ ಸಿಪ್ಪೆಯಂತಾಗಿದೆ. ಇಲ್ಲದಿದ್ದರೆ ಕಾಡಿನ ಆಚೆಗೆ ನೆಟ್ಟಿದ್ದ ಈ ಗಡಿಕಲ್ಲು ಈಚೆಗೆ ಬಂದು ಬೀಳುತ್ತಿತ್ತೇ?” ಎಂದನು.

ಅದಕ್ಕೆ ಚೆನ್ನಯನು “ಅದು ಮೊದಲಿದ್ದಲ್ಲೇ ಏಕೆ ಇರಬಾರದು?” ಎಂದು ಕೇಳಿದನು. ಆದರೆ ಅವನು ಕೋಟಿಯ ಪ್ರತ್ಯುತ್ತರವನ್ನು ನಿರೀಕ್ಷಿಸಲಿಲ್ಲ. ಅದರ ಬದಲಾಗಿ, ನಾಲ್ವರು ಹೊರಲಾರದಷ್ಟು ತೂಕವಾದ ಆ ಗಡಿಕಲ್ಲನ್ನು ತನ್ನ ಎರಡೂ ಕೈಗಳಿಂದ ಅಲ್ಲಾಡಿಸಿ, ಅದಕ್ಕೆ ಬೆನ್ನುಕೊಟ್ಟು, ಎತ್ತಿ ಒಯ್ಯತೊಡಗಿದನು.

ಅಷ್ಟರಲ್ಲಿ ಎಣ್ಮೂರಿಂದ ಪಂಜಕ್ಕಾಗಿ ನಾಲ್ಕುಮಂದಿ ಆಳುಗಳೊಡನೆ ಅದೇ ದಾರಿಯಲ್ಲಿ ಹೋಗುತ್ತಿದ್ದ ಕಿನ್ನಿಚೆನ್ನಯನು ಚೆನ್ನಯನು ಮಾಡುತ್ತಿದ್ದ ಕೆಲಸವನ್ನು ಕಂಡು, ಅವರಿಬ್ಬರನ್ನು ಎವೆಯಿಕ್ಕದೆ ನೋಡುತ್ತ ಅಲ್ಲಿಯೇ ತಡೆದನು. ಅವನ ಆಳುಗಳೂ ಅವನ ಹಿಂದೆಯೇ ನಿಂತರು.

ಕೋಟಿಯು ಗಡಿಯ ಕಲ್ಲನ್ನು ಹೊತ್ತುಕೊಂಡು ಹೋಗುವ ಚೆನ್ನಯನೊಡನೆ "ತಮ್ಮಾ ಅಳುಕಬೇಡ, ತುಳುಕಬೇಡ" ಎಂದು ಸೂಚಿಸಿದನು.

ಕೋಟಿಯನ್ನು ಕುರಿತು ಕಿನ್ನಿಚೆನ್ನಯನು "ಈತನು ನಿನ್ನ ತಮ್ಮನೋ? ಈ ಗಡಿಕಲ್ಲನ್ನು ಅವನು ಏತಕ್ಕೆ ಕಿತ್ತು ಬಿಟ್ಟನು?" ಎಂದು ಕೇಳಿದನು.

ಆ ಮಾತಿಗೆ ಕೋಟಿಯು ಆ ಕಾಡಿನ ಆಚೆಕಡೆಯ ಗಡಿಯನ್ನು ಕೈಸನ್ನೆಯಿಂದ ತೋರಿಸಿ, "ಅಯ್ಯಾ, ಈ ಗಡಿಕಲ್ಲು ನಿಲ್ಲತಕ್ಕ ಸ್ಥಳವು ಕಾಡಿನ ಆಚೆಗಿದೆ. ನಾವು ಕಣ್ಣಾರೆ ಕಂಡಿದ್ದೇವೆ. ಪಂಜಕ್ಕೆ ಬಲಬರುತ್ತಲೇ ಅಲ್ಲಿದ್ದ ಕಲ್ಲು ಇಲ್ಲಿಗೆ ಹಾರಬೇಕೆ?" ಎಂದನು.

ಇಷ್ಟರೊಳಗೆ ಚೆನ್ನಯನು ಕಲ್ಲನ್ನು ಮೊದಲಿದ್ದಲ್ಲಿ ನಿಲ್ಲಿಸಿ ಜಾಗ್ರತೆಯಾಗಿ ಬಂದು, "ಈ ಕಲ್ಲು ಎಣ್ಮೂರಿನ ಜಾಗವನ್ನು ಯಾಕೆ ಎತ್ತಿಕೊಳ್ಳಬೇಕು? ಮುಂಚಿನ ರೀತಿ ರಿವಾಜು ಈಗಲೂ ನಡೆಯಲಿ" ಎಂದು ಮುಗಿಸಿದನು.

ಅವರಿಬ್ಬರ ನಿಲುವು ಚೆಲುವುಗಳಿಂದ ಬೆರಗಾಗಿ, ಅವರ ನಡೆನುಡಿಗಳಿಂದ ಮರುಳಾಗಿ, ಮಾತನಾಡುವುದಕ್ಕೆ ನಾಲಗೆ ಬಾರದೆ ದುರದುರನೆ ಅವರ ಮುಖವನ್ನೇ ಒಂದೇ ಸಮನಾಗಿ ನೋಡುತ್ತಿದ್ದ ಕಿನ್ನಿಚೆನ್ನಯನು ಅರೆಗಳಿಗೆ ಮೇಲೆ ಸ್ವಲ್ಪ ಧೈರ್ಯಗೊಂಡು, "ಬುದ್ಧೀ, ತಮ್ಮನ್ನು ನೋಡಿದರೆ ತಾವು ಯಾರೋ ಮೇಲಿನ ಲೋಕದಿಂದ ಕೆಳಗಿನ ಲೋಕಕ್ಕೆ ಬಂದವರ ಹಾಗೆ ಕಾಣುತ್ತದೆ; ಆದರೆ ತಾವು ಯಾರು ಎಂದು ತಮ್ಮೊಂದಿಗೆ ಕೇಳುವುದಕ್ಕೆ ನಾಲಗೆಯು ಹೆದರಿ ತರತರಿಸುತ್ತದೆ-ನಿಜವಾಗಿಯೂ ತಾವು ಯಾರು ಎಂದು ಅಪ್ಪಣೆಯಾಗಬೇಕು" ಎಂದು ಕೈಮುಗಿದು ಕೇಳಿದನು.

ಚೆನ್ನಯನು ಕತ್ತಿಯ ಹಿಡಿಗೆ ಕೈಹಾಕಿದನು. ಕೋಟಿಯು "ಅಯ್ಯಾ, ಕಳ್ಳುಕುಡಿದು ಮೈಹಾಳು ಮಾಡಬಾರದು; ಸುಳ್ಳು ನುಡಿದು ಬಾಯಿ ಹೊಲಸು ಮಾಡಬಾರದು; ನೋಡಯ್ಯಾ,

ನಾವಿಬ್ಬರು ಅಣ್ಣ ತಮ್ಮಂದಿರು, ಅವಳಿಜವಳಿ: ನಾನು ಕೋಟಿ-ಅಣ್ಣ, ಇವನು ಚೆನ್ನಯ-ನನ್ನ ತಮ್ಮ" ಎಂದು ಗಂಭೀರತೆಯಿಂದ ನುಡಿದನು.

ಇದನ್ನು ಕೇಳಿದ ಆ ಐವರೂ ಒಡನೆಯೇ ಹಿಂದಕ್ಕೆ ಸರಿದು, ಬಾಯಲ್ಲಿ ಮಾತು ಹೊರಡದೆ ಅಲ್ಲಿಯೇ ಕೈಕಟ್ಟಿ ನಿಂತುಕೊಂಡರು. ಅನಂತರ ಕಿನ್ನಿಚೆನ್ನಯನು "ಬುದ್ದೀ, ಹುಡುಕಿದರೆ ದೊರೆಯದ ಮದ್ದುಬಳ್ಳಿ ಕಾಲಿಗೆ ತೊಡರಿದಂತಾಯಿತು; ಕಣ್ಣಿಗೆ ಕಾಣದ ಚಿನ್ನದ ಕೊಪ್ಪರಿಗೆ ಕೈಯಲ್ಲಿ ಬಂದು ಕುಳಿತಂತಾಯಿತು; ತಮ್ಮಿಬ್ಬರನ್ನು ಹುಡುಕಿಬರಬೇಕೆಂದು ಹೊರಟದ್ದ ನಮಗೆ ಇಲ್ಲಿಯೇ ತಮ್ಮ ದರ್ಶನವಾಯಿತು" ಎಂದು ಬಹಳ ವಿನಯದಿಂದ ಹೇಳಿಕೊಂಡನು.

ಕೋಟಿಯು "ನೀವು ಯಾರು?" ಎಂದು ವಿಚಾರಿಸಿದನು.

ಕಿನ್ನಿಚೆನ್ನಯ- "ಬುದ್ಧಿ, ತಮಗೆ ಕೇಮರ ಬಲ್ಲಾಳನಲ್ಲಿ ಆದ ಮರೆ ಮೋಸವನ್ನು ಕೇಳಿ, ತಮ್ಮನ್ನು ಸಂಧಿ ಮಧ್ಯಸ್ಥಿಕೆಯಿಂದ ಕರೆದುಕೊಂಡು ಬರಲು ಎಣ್ಮೂರು ಬಲ್ಲಾಳನಿಂದ ಆಜ್ಞಾಪಿಸಲ್ಪಟ್ಟ ಜನಗಳು ನಾವು. ತಮ್ಮ ಸಮಾಚಾರವನ್ನು ಮೊದಲೇ ಕೇಳಿದ್ದೇವೆ."

ಕೋಟಿ-"ನಮ್ಮ ಸುದ್ದಿಯನ್ನು ಯಾರು ಹೇಳಿದರು?"

ಕಿನ್ನಿಚೆನ್ನಯ-"ತಮ್ಮ ಸಾಕುತಾಯಿ ಸಾಯಿನ ಬೈದಿತಿ."

ಕೋಟಿ-"ಅದು ಹೇಗೆ? ಅವಳು ಪಡುಮಲೆಯಲ್ಲಿ ಇದ್ದಾಳೆ. ಅವಳಿಂದ ಗೊತ್ತಾಗಲು ಸಾಧ್ಯವಿಲ್ಲವಲ್ಲ?"

ಕಿನ್ನಿಚೆನ್ನಯ-"ಸಾಯಿನ ಬೈದಿತಿಯು ಎಣ್ಮೂರನ್ನು ಸೇರಿಕೊಂಡು ಬಹುಕಾಲವಾಯಿತು. ಅವಳು ನಿಮ್ಮನ್ನು ಒಂದು ತಡವೆ ಕಣ್ಣ ತುಂಬ ನೋಡಬೇಕೆಂದು ಹಂಬಲಿಸುತ್ತಿದ್ದಾಳೆ, ಬುದ್ಧಿ"

ಕೋಟಿ-"ಅವಳು ಎಲ್ಲಿದ್ದಾಳೆ?"

ಕಿನ್ನಿಚೆನ್ನಯ-"ಅಯ್ಯನೂರು ಬೈಲಿನ ತಿಮ್ಮಣ್ಣ ಬೈದ್ಯನಲ್ಲಿ."

ಕೋಟಿ-"ಅವಳು ಆರೋಗ್ಯವಾಗಿರುವಳೋ?"

ಕಿನ್ನಿಚೆನ್ನಯ-"ಮೂರು ದಿವಸಗಳ ಹಿಂದೆ ಅವಳ ಜೀವದಾಸೆ ಬಿಟ್ಟು ಬಾಯಿಗೆ ಹಾಲೆರೆದಿದ್ದರು, ನಿನ್ನೆ ಮೊನ್ನಿನ ಸ್ಥಿತಿ ನನಗೆ ಗೊತ್ತಿಲ್ಲ, ಬುದ್ಧಿ."

ಇಷ್ಟು ಮಾತುಕತೆಯಾದನಂತರ ಕೋಟಿಚೆನ್ನಯರು ಅಲ್ಲಿ ಬಂದವರ ಜತೆಯಲ್ಲಿ ಹೊರಟುಬಂದು, ಸಂಜೆಗೆ ಮುಂಚಿತವಾಗಿ ಎಣ್ಮೂರನ್ನು ಮುಟ್ಟಿ, ತಿಮ್ಮಣ್ಣ ಬೈದ್ಯನ ಮನೆಯೊಳಕ್ಕೆ ಹೋದರು.

ಆ ಮನೆಯ ಚಾವಡಿಯ ಮೇಲೆ ಒಂದು ಹರಳೆಣ್ಣೆಯ ದೀಪವು ಮಿಣಮಿಣನೆ ಉರಿಯುತ್ತಲಿತ್ತು. ಅಲ್ಲಿಯೇ ಒಂದು ಕೋಣೆಯೊಳಗೆ ಸುಮಾರು ಅರವತ್ತು ವರ್ಷ ವಯಸ್ಸು ಮೀರಿದ ಹೆಂಗಸೊಬ್ಬಳು ಒಂದು ಚಾಪೆಯ ಮೇಲೆ ಮಲಗಿದ್ದಳು. ಅವಳ ಮೈ ಜ್ವರದಿಂದ ಬೆಂದು, ಕೆಮ್ಮಿನಿಂದ ಜಜ್ಜಿಹೋಗಿ, ಗರಿಯಂತೆ ಹಗುರವಾಗಿತ್ತು. ಕಿನ್ನಿಚೆನ್ನಯನು ಆ ಚಾಪೆಯ ಹತ್ತಿರ ಬಂದು ಕುಳಿತುಕೊಂಡು, "ಅಮ್ಮಾ, ಈ ಹೊತ್ತು ಹೇಗಿದೆ? ನಿನ್ನ ಮಕ್ಕಳು ಕೋಟಿಚೆನ್ನಯರು ಬಂದಿದ್ದಾರೆ, ನೋಡು" ಎಂದು ಮೆತ್ತಗೆ ಹೇಳಿದನು.

ಆ ಎರಡು ಹೆಸರುಗಳನ್ನು ಕೇಳುತ್ತಲೇ ಅವಳ ಮುಚ್ಚಿದ ಕಣ್ಣು ಕೊಂಚ ತೆರೆಯಿತು. ಬಿಗಿದಿದ್ದ ತುಟಿ ಬಿರಿಯಿತು. "ಓ ನನ್ನ ಬಾಲೆ" ಎಂಬ ಮಾತುಗಳು ಬಾಯಿಂದ ಹೊರಟವು.

ಆಗ ಕೋಟಿಯು ಮುದುಕಿಯ ತಲೆಯನ್ನು ತನ್ನ ಎಡತೊಡೆಯ ಮೇಲೆ ಇಟ್ಟುಕೊಂಡು ಕುಳಿತನು; ಚೆನ್ನಯ್ಯನು ಅವಳ ಕಾಲುಗಳನ್ನು ಹಿಡಿದು ಒತ್ತತೊಡಗಿದನು.

ಚೆನ್ನಯನು "ಅಮ್ಮಾ ಸಾಯಿನ ಬೈದ್ಯರು ಎಲ್ಲಿದ್ದಾರೆ?" ಎಂದು ಕೇಳಿದನು.

ಅದಕ್ಕೆ ಕೋಟಿಯು "ಮಾತನಾಡಿಸಬೇಡ; ಮಾತಾಡಿದರೆ ದಣುವಾಗುತ್ತದೆ" ಎಂದು ತಮ್ಮನಿಗೆ ಸೂಚಿಸಿದನು.

ಸಾಯಿನ ಬೈದಿತಿಯು ಬಹಳ ಆಯಾಸದಿಂದ "ಮಕ್ಕಳೇ! ನನ್ನ ಕಡೆಗಾಲಕ್ಕೆ ಬಂದು ನನಗೆ ಒದಗಿದಿರಿ. ಜಯಸಿರಿ ನಿಮ್ಮ ಭುಜದಲ್ಲಿ ನೆಲಸಲಿ! ನಿಮ್ಮ ಹೆಸರು ನಮ್ಮ ರಾಜ್ಯದಲ್ಲಿ ಉಳಿಯಲಿ!" ಎಂದು ಹೇಳಿ ಬಾಯಿ ತೆರೆದಳು.

ಅಲ್ಲಿ ಇದ್ದವರೆಲ್ಲರು ಅವಳ ಬಾಯಿಗೆ ಒಂದೊಂದು ತಟಕು ಹಾಲು ಎರೆದರು. ಕೊನೆಗೆ ಕೋಟಿ ಚೆನ್ನಯರು ತುಳಸಿ ದಳವನ್ನು ಗಂಗೋದಕವನ್ನೂ ಅವಳ ಬಾಯಿಗೆ ಇಟ್ಟು, ಅವಳ ಕಾಲುಗಳ ಮೇಲೆ ತಮ್ಮ ತಲೆಗಳನ್ನು ಇಟ್ಟು ಕಣ್ಣೀರುಗಳಿಂದ ಒಂದು ನಿಮಿಷ ಅವಳ ಕಾಲು ತೊಳೆದರು. ಬೈದಿತಿಯು ಲೋಕ ಯಾತ್ರೆಯನ್ನು ಮುಗಿಸಿದಳು. ಅನಂತರ ಜಾತಿಧಿಗೆ ಅನುಸಾರವಾಗಿ ನಡೆಯತಕ್ಕ ಸಾವುಸೂತಕಗಳು ನಡೆದುವು.

ಇದಾದ ಕೆಲವು ದಿವಸಗಳ ತರುವಾಯ ಕಿನ್ನಿಚೆನ್ನಯನು ಒಂದು ದಿನ ಎಣ್ಮೂರು ಬಲ್ಲಾಳನ ಓಲಗಕ್ಕೆ ಹೋದನು. ಬಲ್ಲಾಳನು ಅವನನ್ನು ಕಂಡು “ಬಾ, ಇಲ್ಲೇ ಮಣೆ ಇದೆ. ನಿನ್ನನ್ನು ಕಾಣದೆ ಬಹಳ ಕಾಲವಾಯಿತು, ಅಲ್ಲವೇ? ಕೊಟ್ಟ ಕೆಲಸ ಏನಾಯಿತು?” ಎಂದು ಕೇಳಿದನು.

ಅದಕ್ಕೆ ಕಿನ್ನಿಚೆನ್ನಯನು “ಹೌದು, ಬುದ್ಧಿ. ಕೋಟಿಚೆನ್ನಯರನ್ನು ಕರಕೊಂಡು ಬಂದಿದ್ದೇನೆ. ಆದರೆ ಅವರ ಸಾಕುತಾಯಿಯು ತೀರಿಹೋದುದರಿಂದ, ಅವರನ್ನು ತಮ್ಮ ದರ್ಶನಕ್ಕೆ ಕರೆದುಕೊಂಡು ಬರಲು ಇದುವರೆಗೆ ಸಾಧ್ಯವಾಗಲಿಲ್ಲ” ಎಂದನು.

ಬಲ್ಲಾಳನು ಕಿನ್ನಚೆನ್ನಯನ ಮಾತನ್ನು ಕೇಳಿ, ಆಶ್ಚರ್ಯಪಟ್ಟನು. ಸಂತೋಷದಿಂದಲೂ ಕುತೂಹಲದಿಂದಲೂ ಪ್ರಶ್ನೆಯ ಮೇಲೆ ಪ್ರಶ್ನೆ ಸುರಿಸಿದನು. “ಓಹೋ? ಹಾಗೋ? ಯಾವಾಗ ಬಂದಿರಿ? ಕೋಟಿ ಚೆನ್ನಯರು ನಿನಗೆ ಎಲ್ಲಿ ನೋಡಸಿಕ್ಕಿದರು? ಅವರನ್ನು ಹೇಗೆ ಬಿಡುಗಡೆ ಮಾಡಿಸಿಕೊಂಡೆ? ಕೇಮರನು ಅವರನ್ನು ಏಕೆ ಸೆರೆಯಲ್ಲಿ ಹಾಕಿದನಂತೆ?” ಎಂದು ಕೇಳುತ್ತಾ ಹೋದನು.

ಕಿನ್ನಿಚೆನ್ನಯನು ನಡೆದ ಸಂಗತಿಯನ್ನು ಬಲ್ಲಾಳನಿಗೆ ವಿವರಿಸಿ ಹೇಳಿದನು. ಬಲ್ಲಾಳನು “ಅವರು ಹೇಗಿದ್ದಾರೆ?” ಎಂಬ ಪ್ರಶ್ನೆಗೆ “ನಾನು ಏನು ಅನ್ನಲಿ, ಬುದ್ಧಿ? ಕಣ್ಣಿಗೆ ಚೆಲುವರು; ಜನರಿಗೆ ಮರುಳರು; ಅಂಥವರು ಜನಿಸಿದವರಲ್ಲಿ ಇಲ್ಲ, ಇನ್ನು ಜನಿಸಲಿಕ್ಕಿಲ್ಲ. ಅವರಿದ್ದ ರಾಜ್ಯದಲ್ಲಿ ಒಂದು ಊರು ಅಳಿಸಬಹುದು, ಒಂದು ಊರು ಉಳಿಸಬಹುದು?” ಎನ್ನುತ್ತಾ ಅವರನ್ನು ಕೊಂಡಾಡಿದನು.

“ಹಾಗಾದರೆ ಅವರನ್ನು ನಾಳೆ ನಡುಹಗಲು ಓಲಗಕ್ಕೆ ಕರೆದುಕೊಂಡು ಬಾ” ಎಂದು ಹೇಳಿ, ಬಲ್ಲಾಳನು ಒಳಕ್ಕೆ ಹೋದನು.

ಕಿನ್ನಿಚೆನ್ನಯನು ಬೀಡಿನಿಂದ ಇಳಿದು ಕೋಟಿಚೆನ್ನಯರಿದ್ದಲ್ಲಿಗೆ ಹೋಗಿ, ಮರುದಿನ ಬಲ್ಲಾಳರ ಓಲಗಕ್ಕೆ ಹೋಗುವುದಾಗಿ ನಿಶ್ಚಯ ಮಾಡಿದನು.

ಎಣ್ಮೂರಿನ ದೇವಬಲ್ಲಾಳನು ಪಡುಮಲೆಯ ಪೆರುಮಾಳು ಬಲ್ಲಾಳನಷ್ಟು ರಣಶೂರನೂ ಅಲ್ಲ, ಪಂಜದ ಕೇಮರ ಬಲ್ಲಾಳನಷ್ಟು ರಣಭೀರುವೂ ಅಲ್ಲ. ಆತನು ಪೆರುಮಾಳನಿಗಿಂತ ಸಾಧುವಾಗಿದ್ದನು. ಕೇಮರನಿಗಿಂತ ಬುದ್ಧಿವಂತನಾಗಿದ್ದನು. ಈ ಮೂವರಲ್ಲಿ ಎಲ್ಲರಿಗಿಂತ ಹೆಚ್ಚಿನ ಧರ್ಮಬುದ್ಧಿಯು ಅವನಲ್ಲಿತ್ತು. ಆತನು ಅಧರ್ಮ, ದಾರಿದ್ರ್ಯ, ರೋಗ, ಅಂತಃಕಲಹ ಇವು ರಾಜ್ಯದ ತಿರುಳನ್ನು ತಿನ್ನುವ ಹುಳುಗಳೆಂದು ಆಗಾಗ ಹೇಳುತ್ತಿದ್ದನು. ಆತನ ಹೆಸರು ತುಳು ದೇಶದ ಚೌಟ ಬಂಗರು ಮನೆತನಗಳಲ್ಲಿ ಮಾತ್ರವಲ್ಲದೆ, ಇಕ್ಕೇರಿಯ ಅರಮನೆಯವರೆಗೆ ಹಬ್ಬಿಹರಡಿತ್ತು. ಎಂದಿನಿಂದ ಇಕ್ಕೇರಿಯವರು ಇವನ ಹೆಸರನ್ನು ಕೊಂಡಾಡ ತೊಡಗಿದರೋ ಅಂದಿನಿಂದ ನೆರೆಕರೆಯ ಬಲ್ಲಾಳರು ಇವನನ್ನು ಹಳಿದು ಹೀಯಾಳಿಸಿ, ಹಗೆಮಾಡತೊಡಗಿದರು. ಹೀಗೆ ಹಗೆಮಾಡಿ ಇವನಿಗೆ ಕೇಡು ಬಗೆದವರಲ್ಲಿ ಕೇಮರ ಬಲ್ಲಾಳನೇ ಮೊದಲನೆಯವನು.

ಕೇಮರ ಬಲ್ಲಾಳನಿಗೆ ದೇವಬಲ್ಲಾಳನಲ್ಲಿದ್ದ ಹೊಟ್ಟೆಯಕಿಚ್ಚು ಆ ಚೆಂದುಗಿಡಿಯ ದುರಾಲೋಚನೆಯ ಗಾಳಿಯಿಂದ ಭುಗ್ಗನೆ ಹೊತ್ತಿತ್ತು. ಅವನು ತನಗೆ ಪಂಜದ ಪಟ್ಟವಾದ ಕೆಲವು ವರ್ಷಗಳಲ್ಲಿಯೇ ದೇವ ಬಲ್ಲಾಳನ ಸೀಮೆಯ ಎಲ್ಲೆಯಲ್ಲಿದ್ದ ಜನಗಳನ್ನು ಕಾಡತೊಡಗಿದನು. ಕೇಮರ ಬಲ್ಲಾಳನ ಉದ್ಧಟತನದ ಮುಂದೆ ದೇವಬಲ್ಲಾಳನ ಸಂಧಿ ಸಾಮಗಳು ನಡೆಯಲಿಲ್ಲ. ಬರುಬರುತ್ತಾ ದೇವಬಲ್ಲಾಳನ ಸೀಮೆಯು ಮುಂಜಾನೆಯ ನೆರಳಂತೆ ಗಿಡ್ಡವಾಗುತ್ತ ಹೋಯಿತು. ತನ್ನ ಕೈಯಿಂದ ಅನ್ಯಾಯವಾಗಿ ಕಿತ್ತುಕೊಂಡ ತನ್ನ ಸೀಮೆಯ ಭಾಗವನ್ನು ಇತರರ ಸಹಾಯದಿಂದಾದರೂ ಮರಳಿ ಪಡೆಯಬೇಕೆಂದು ದೇವಬಲ್ಲಾಳನು ಸಮಯ ಕಾಯುತ್ತಿದ್ದನು. ಆ ಅಪ್ರತಿಮ ವೀರರಾದ ಕೋಟಿಚೆನ್ನಯರ ಭುಜಬಲದಿಂದ ತನ್ನ ರಾಜ್ಯವು ಮರಳಿ ತಲೆಯೆತ್ತುವಂತೆ ಮಾಡಬೇಕೆಂದು ಬಗೆದು ಅವರನ್ನು ಆದರದಿಂದ ಓಲಗದಲ್ಲಿ ಕಾಣುವುದಕ್ಕೆ ಎಲ್ಲವನ್ನೂ ಅಣಿ ಮಾಡಿದನು.

ಮರುದಿನ ಮಧ್ಯಾಹ್ನ ಎಣ್ಮೂರಿನ ಕಿನ್ನಿಚೆನ್ನಯನನ್ನು ಮುಂದಿಟ್ಟಕೊಂಡು ಕೋಟಿ ಚೆನ್ನಯರು ತಾಯಿಯ ಸಂಗಾತದ ಮಕ್ಕಳಂತೆಯೂ, ಹೇಟೆಯ ಮಗ್ಗುಲಲ್ಲಿನ

ಕೋಳಿಮರಿಗಳಂತೆಯೂ, ಸೂಜಿಯ ಹಿಂದುಗಡೆಯ ನೂಲೆಳೆಗಳಂತೆಯೂ ಬೀಡಿಗೆ ಹೋದರು. ಎಣ್ಮೂರು ಬಲ್ಲಾಳನು ಅವರನ್ನು ಸಾದರ ಸಂಭ್ರಮದಿಂದ ಕಂಡು, ಓಲಗಶಾಲೆಗೆ ಕರೆದುಕೊಂಡು ಬಂದು ಯೋಗಕ್ಷೇಮವನ್ನು ವಿಚಾರಿಸಿ, ಅವರ ಹಿಂದಿನ ಸಮಾಚಾರವನ್ನು ಕೇಳಿ, ತನ್ನ ರಾಜ್ಯದಲ್ಲಿ ಅವರು ಸಹಸ್ರಕಾಲ ಸುಖವಾಗಿ ಇರಬೇಕೆಂಬುದಾಗಿ ಸೂಚಿಸಿದನು.

ಆಗ ಕಿನ್ನಿಚೆನ್ನಯನು "ಬುದ್ಧಿ, ನಮಗೆ ಬೇಕಾದವರು ಬೀಡಿನಿಂದ ದೂರವಾಗಿ ಇರಬಾರದಷ್ಟೆ. ಇಂಥ ಜಾಗವನ್ನೇ ಇವರಿಗೆ ಕೊಡಿಸಬೇಕೆಂಬುದಕ್ಕೆ ನನಗೆ ಅಪ್ಪಣೆಯಾಗಲಿ" ಎಂದು ವಿಜ್ಞಾಪಿಸಿಕೊಂಡನು.

ದೇವಬಲ್ಲಾಳನು "ಬಂಟರೆ. ನಿಮಗೆ ನಮ್ಮ ರಾಜ್ಯದಲ್ಲಿ ಯಾವ ಸ್ಥಳಬೇಕು? ಬಿಲ್ಲರ ನಟ್ಟಿಲ್ಲು ಆದೀತೇ?" ಎಂದು ಕೇಳಿದನು.

ಕೋಟಿ-"ಬುದ್ದಿ, ಅದನ್ನು ಕೊಟ್ಟರೆ ಜಾತಿಗೆ ಹಗೆ ಎಂಬಂತೆ ನಮ್ಮವರ ವಿರೋಧವೇ ನಮಗೆ ಬರಬಹುದು."

ದೇವಬಲ್ಲಾಳ-"ಒಕ್ಕಲಿಗನ ಗುತ್ತು ಬಾಳಿಕೆ ಕೊಟ್ಟರೆ-"

ಕೋಟಿ-"ನಾಯಿ ಬೆಕ್ಕಿನ ವೈರದಂತೆ"

ದೇವಬಲ್ಲಾಳ-"ಬ್ರಾಹ್ಮಣರ ಚಿರಂತಳ್ಳಿ ಕೊಡುತ್ತೇನೆ, ಆಗದೋ?"

ಕೋಟಿ-"ಅದಾಗಬಹುದು. ಆದರೆ ಅದನ್ನು ತೆಗೆದುಕೊಂಡರೆ ನಾಗರಹಾವನ್ನೂ ಕನ್ನಡಿಹಾವನ್ನೂ ಒಂದೇ ಬಿಲದಲ್ಲಿ ಇಟ್ಟಂತಾದೀತು."

ದೇವಬಲ್ಲಾಳ-"ಹಾಗಾದರೆ, ನೀವೇ ಒಂದನ್ನು ಆಯ್ದುಕೊಳ್ಳಿ."

ಕೂಡಲೇ ಚೆನ್ನಯನು "ಅಣ್ಣಾ, ಪಡುಮಲೆಯ ಜೋಯಿಸರು ಹೇಳಿದ್ದು ನನಗೆ ನೆನಪಿದೆ. ಆ ಅಯ್ಯನೂರು ಬೈಲು ಇಲ್ಲೇ ಅಲ್ಲವೇ?" ಎಂದನು.

ಕೋಟಿಯು ಆ ಮಾತನ್ನುಕೇಳಿ "ಬುದ್ಧಿ, ಅಯ್ಯನೂರು ಗುತ್ತನ್ನು ಕರುಣಿಸಿರಿ" ಎಂದನು. ಅದಕ್ಕೆ ದೇವಬಲ್ಲಾಳನು "ಅದು ಒಕ್ಕಲಿಲ್ಲದ ಗುತ್ತು. ಅಷ್ಟೇ ಅಲ್ಲ, ಆ ಗುತ್ತು ತನ್ನ ಸೀಮೆಗೆ

ಸೇರಿದ್ದೆಂದು ಪಂಜದ ಕೇಮರ ಬಲ್ಲಾಳನು ಸುಳ್ಳುಸಾಧನೆ ಮಾಡಿ, ನಮ್ಮ ಹಳೆಯ ಗಡಿಕಲ್ಲುಗಳನ್ನು ಕಿತ್ತು ಹಾಕಿಸಿ, ಗುತ್ತಿನಲ್ಲಿ ಹೊಗೆ ಏಳುವುದಕ್ಕೆ ಬಿಡುವುದಿಲ್ಲ. ಇದು ನನಗೆ ಗೊತ್ತಿದ್ದು, ನಿಮ್ಮನ್ನು ಮೊದಲೇ ಜಗಳದ ಮಣೆಯ ಮೇಲೆ ಏತಕ್ಕೆ ಕೂರಿಸಬೇಕು?" ಎಂದು ಆಕ್ಷೇಪ ಹೇಳಿದನು.

ಗಡಿಕಲ್ಲುಗಳ ಮಾತು ಬರುತ್ತಲೇ ಕೋಟಿಚೆನ್ನಯರು ಒಬ್ಬನು ಮತ್ತೊಬ್ಬನ ಮುಖವನ್ನು ನೋಡಿದರು. ಚೆನ್ನಯನು "ಬುದ್ಧಿ, ನಾವು ನಿಮ್ಮ ರಾಜ್ಯದಲ್ಲಿ ಕಾಲಿಡುವಾಗಲೇ ಆ ಜಗಳದ ಮಣೆಯನ್ನು ಮೆಟ್ಟಿ ಬಂದಿದ್ದೇವೆ. ನಾನು ಆ ಗಡಿಕಲ್ಲನ್ನು ಮುಂಚಿನ ಸ್ಥಳದಲ್ಲಿ ಹೊತ್ತು ಹಾಕಿ, ನಿಮ್ಮ ರಾಜ್ಯಕ್ಕೆ ಐವತ್ತು ಮಾರು ಜಾಗವನ್ನು ಕೂಡಿಸಿದ್ದೇನೆ. ಅಯ್ಯನೂರು ಗುತ್ತನ್ನು ನಮಗೆ ದಯಪಾಲಿಸಿ ಬಿಡಿ. ಜಗಳಕ್ಕೆ ಬರುವವರು ಬರಲಿ, ನಾವು ನೋಡಿಕೊಳ್ಳುತ್ತೇವೆ" ಎಂದನು.

ದೇವಬಲ್ಲಾಳನು "ಹಾಗಾದರೆ ಇನ್ನು ಜಗಳ ತಪ್ಪದು" ಎಂದನು.

ಕೋಟಿ "ಜಗವು ಇರುವಷ್ಟು ಕಾಲ ಜಗಳವು ಇದೆ, ಬುದ್ಧಿ" ಎಂದನು.

ದೇವಬಲ್ಲಾಳನು "ಆ ಗುತ್ತು ನಿಮಗೆ ಮೆಚ್ಚಿಗೆಯಾಗಿದ್ದರೆ ನನ್ನ ಅಡ್ಡಿ ಇಲ್ಲ ಅದನ್ನು ನೀವು ಸಹಸ್ರ ಕಾಲಾವಧಿ ಅನುಭವಿಸಿಕೊಂಡು ಬಂದು ಬೀಡಿನ ಮರ್ಯಾದೆಯನ್ನು ಕಾಪಾಡುವಂಥವರಾಗಬೇಕು" ಎಂದು ಹೇಳಿ, ಕೈವೀಳ್ಯವನ್ನು ಕೊಟ್ಟನು.

ಅದನ್ನು ಸ್ವೀಕರಿಸಿ ಕೋಟಿಚೆನ್ನಯರು ಎಣ್ಮೂರು ಬಲ್ಲಾಳನ ಕೈ ಸೇರಿದ್ದ ಅಯ್ಯನೂರು ಗುತ್ತನ್ನು ಮಾಡಿಕೊಂಡು ಅಲ್ಲಿ ಸುಖವಾಗಿದ್ದರು.

ಚೆಂದುಗಿಡಿಯೂ ಕೇಮರನೂ ಕೋಟಿಚೆನ್ನಯರನ್ನು ಹಿಡಿಯಲಿಕ್ಕೆ ಮಾಡಿದ ಮೋಸ, ಅವರು ಸೆರೆಯಿಂದ ತಪ್ಪಿಸಿಕೊಳ್ಳಲು ಮಾಡಿದ ಉಪಾಯ, ಅವರನ್ನು ಎಣ್ಮೂರಿನವರು ಪ್ರೀತಿಯಿಂದ ಗೌರವಿಸಿದ ಸಂಗತಿ, ಅಲ್ಲಿ ಅವರಿಗೆ ದೊರೆತ ಆಶ್ರಯ, ಅವರ ಸಹಾಯದಿಂದ ಎಣ್ಮೂರು ಬಲ್ಲಾಳನು ತನ್ನ ರಾಜ್ಯವಿಸ್ತಾರಕ್ಕಾಗಿ ಮಾಡುತ್ತಿರುವ ಹಂಚಿಕೆ ಇವುಗಳ ಸುದ್ದಿಯು ಪಂಜಸೀಮೆಯಲ್ಲಿಯೂ ಪಡುಮಲೆ ಸೀಮೆಯಲ್ಲಿಯೂ ಹಬ್ಬುವುದಕ್ಕೆ ಬಹುಕಾಲ ಹಿಡಿಯಲಿಲ್ಲ. ಒಬ್ಬ ಬಲ್ಲಾಳನು ಸಿಟ್ಟಿನಿಂದ ತನ್ನ ಊರಲ್ಲಿದ್ದ ಕಿನ್ನಿದಾರುವನ್ನೂ ಅವಳ ಗಂಡನನ್ನೂ ಬಹಳವಾಗಿ

ಕಾಡಿದನು; ಇನ್ನೊಬ್ಬ ಬಲ್ಲಾಳನು ತನ್ನ ಬೀಡಿನಲ್ಲಿದ್ದ ಮುದುಕ ಸಾಯಿನ ಬೈದ್ಯನನ್ನು ಹಿಂಸೆ ಮಾಡಿದನು. ಇಬ್ಬರ ಕೋಪವು ಇಷ್ಟರಲ್ಲೇ ಮುಗಿಯಲಿಲ್ಲ. ಅವರು ಕೋಟಿ ಚೆನ್ನಯರನ್ನು ಕಂಡಲ್ಲಿ ಹಿಡಿದು ಕಡಿದು ಹಾಕಬೇಕೆಂಬುದಾಗಿ ಅಪ್ಪಣೆಕೊಟ್ಟು, ಆಗಾಗ ತಮ್ಮ ಕಡೆಯ ಜನಗಳನ್ನು ಎಣ್ಮೂರಿಗೆ ಗುಟ್ಟಿನಿಂದ ಕಳುಹಿಸಿದರು; ವಿಷದ ಹಾಲಿನಿಂದ ಅವರನ್ನು ಕೊಲ್ಲಬೇಕೆಂದು ಗೊಲ್ಲರ ಮೂಲಕವಾಗಿ ದುರಾಲೋಚನೆ ನಡೆಸಿದರು; ಅವರ ಬಿತ್ತ ಉಳಿಯದಂತೆ ಮಾಡಬೇಕೆಂದು ಕಣಿಯರಿಂದ ಬಗೆಬಗೆಯ ಮದ್ದುಮಾಟಗಳನ್ನು ಮಾಡಿಸಿದರು. ಏನು ಮಾಡಿದರೂ ಕೋಟಿಚೆನ್ನಯರ ತಲೆಯ ಕೂದಲು ಒಂದು ಸಹ ಅದುರಿಸಲು ಸಾಧ್ಯವಾಗಲಿಲ್ಲ.

ಜೋಡು ಹುಲಿಗಳ ಬಾಯಿಂದ ತಪ್ಪಿಸಿಕೊಂಡು ಸುರಕ್ಷಿತವಾದ ಹಸುರು ಹುಲ್ಲುಗಾವಲಿಗೆ ಹೋಗಿ, ಕುಣಿದು ಮೇಯುವ ಹುಲ್ಲೆಯ ಮರಿಗಳನ್ನು ಕಂಡು ಆರ್ಭಟಿಸುವ ದುಷ್ಟ ವ್ಯಾಘ್ರಗಳಂತೆ ಆ ಇಬ್ಬರು ಬಲ್ಲಾಳರು ಕೋಟಿಚೆನ್ನಯರನ್ನು ಹುಟ್ಟಡಗಿಸಿಬೇಕೆಂದು ಮನಸ್ಸಿನಲ್ಲಿ ದೃಢ ಮಾಡಿಕೊಂಡರು. ಈ ಮಧ್ಯದಲ್ಲಿ ಚೆನ್ನಯನು ಗಡಿಕಲ್ಲನ್ನು, ಒಂದು ಕಡೆಯಿಂದ ಕಿತ್ತು ಇನ್ನೊಂದು ಕಡೆಯಲ್ಲಿ ನೆಟ್ಟದ್ದು, ಅಯ್ಯನೂರು ಗುತ್ತನ್ನು ವಿಸ್ತರಿಸಿದ್ದು, ಅವರಿಬ್ಬರು ಪಂಜಸೀಮೆಗೆ ಸೇರಿದ್ದ ಬಂಟಮಲೆಯಲ್ಲಿ ಹೇಳದೆ ಕೇಳದೆ ಆಗಾಗ ಭೇಟೆಯಾಡಿದ್ದು, ಎಲ್ಲರ ಹೃದಯದಲ್ಲಿಯೂ ಅವರಿಂದ ಒಂದು ಬಗೆಯ ಭೀತಿ ಹುಟ್ಟಿದ್ದು-ಇವನ್ನು ಕೇಳಿ, ಪಡುಮಲೆಯ ಪೆರುಮಾಳನ್ನೂ ಪಂಜದ ಕೇಮರನೂ ಇನ್ನು ಯುದ್ಧ ಮಾಡದೆ ತೀರದೆಂದು ನಿಶ್ಚಯಿಸಿದರು. ಈ ಆಲೋಚನೆಯಿಂದ ಜನಗಳನ್ನು ಕೂಡಿಸುತ್ತ, ಮುಸ್ತೈದೆಯನ್ನು ಒದಗಿಸುತ್ತ, ತಕ್ಕ ವೇಳೆಯನ್ನು ಎದರು ನೋಡುತ್ತ ಇದ್ದರು.

ಬೇಡುವ ಬಡವನು ಕೊಡುಗೈಯಾಗಿರುವ ದೊರೆಗೆ ಬೇಕಾದವನಾಗುತ್ತಲೇ ಚಾಡಿಯ ಬಾಯಿ ತುರಿಸಹತ್ತುತ್ತದೆ. ಕೋಟಿಚೆನ್ನಯರು ಎಣ್ಮೂರು ಬಲ್ಲಾಳನ ಪ್ರೀತಿಗೆ ಪಾತ್ರರಾಗಿ ಅವನ ಬೀಡಿನಲ್ಲಿ ಪ್ರಬಲರಾದುದನ್ನು ಕಂಡು ಚಾಡಿಗಾರರು ಬಲ್ಲಾಳನನ್ನು ಅವರ ಮೇಲೆ ತಿರುಗಿಸುವುದಕ್ಕೆ ತೊಡಗಿದರು. 'ಅರಸರ ಕಿವಿಗೆ ತರಲೆ ಹಾಳು, ಬಾಗಿಲ ಕಿವಿಗೆ ಒರಲೆ ಹಾಳು' ಎಂಬ ಗಾದೆಗೆ ಸರಿಯಾಗಿ, ಬಲ್ಲಾಳನು ಆ ಚಾಡಿಗಾರರ ಮಾತಿಗೆ ಕಿವಿಗೊಡಹತ್ತಿದನು. ಅವನು ಕಿವಿಗೊಟ್ಟ ಹಾಗೆಲ್ಲಾ ಚಾಡಿ ಹೆಚ್ಚುತ್ತ ಹೋಯಿತು.

ಆ ಚಾಡಿಗಾರರಲ್ಲಿ ಒಬ್ಬನು ಒಂದು ದಿನ ಬಲ್ಲಾಳನ ಹತ್ತಿರ ಯಾರೂ ಇಲ್ಲದ್ದನ್ನು ಕಂಡು, "ಬುದ್ಧಿ ಮನೆಯಲ್ಲಿ ಬೇಸರವೆಂದು ಇಲ್ಲಿ ಬಂದೆ. ಇಲ್ಲಿಯೂ ನಮ್ಮ ಹೊಸ ಬಂಟರು ಹೇಳುವಂತೆ ಬೇಸರಿಕೆ" ಎಂದನು.

ಆಗ ಎಣ್ಮೂರು ಬಲ್ಲಾಳನು ಕಿವಿಗಳನ್ನು ಚೆನ್ನಾಗಿ ತೆರೆದು "ಹೊಸ ಬಂಟರು ಏನೆನ್ನುತ್ತಾರೆ?" ಎಂದು ಕೇಳಿದನು.

"ನಮ್ಮ ಸೀಮೆಗೆ ಹೊಸಬರಾದವರಿಗೆ ಇಲ್ಲಿ ಬೇಸರವಾಗುವುದೇನೋ ಸಹಜ" ಎಂದು ಚಾರನು ಮೇಲಿನ ಮೇಲೆ ಹೇಳಿದನು.

"ನೀನು ಅಳುಕಬೇಡ, ಎಲ್ಲವನ್ನೂ ಬಿಚ್ಚಿ ಹೇಳು" ಎಂದು ಬಲ್ಲಾಳನು ಹುಬ್ಬೆತ್ತಿ ಕೇಳಿದನು.

ಚಾಡಿಗಾರ - "ಬುದ್ಧಿ, ಇದು ಬಡ ರಾಜ್ಯವಂತೆ ನೀವು ಬಡ ಬಲ್ಲಾಳರಂತೆ. ಹೀಗೆ ಹೊಸ ಬಂಟರು ಕಲೆ ತೋರಿ ಕುಲ ದೂಷಿಸುತ್ತಾರೆ, ಬುದ್ಧಿ."

ಬಲ್ಲಾಳನು ಇನ್ನು ಹೆಚ್ಚು ಕೇಳುವುದಕ್ಕೆ ಮನಸ್ಸಿಲ್ಲದೆ ಕೋಟಚೆನ್ನಯರನ್ನು ಕರೆತರಿಸಿ, ಚಾಡಿಗಾರನ ಇದಿರಿನಲ್ಲಿ ಅವರನ್ನು ವಿಚಾರಿಸಿದನು. ಆಗ ಚೆನ್ನಯನು ಕೈ ಮುಗಿದು, "ಬುದ್ಧಿ, ಇದು ಯಾವುದೂ ನನ್ನ ಅಣ್ಣನಿಗೆ ಗೊತ್ತಿಲ್ಲ. ಮಾತಾಡಿದ್ದು ನಾನು. ನಾನು ನಿಮ್ಮ ಕುಲವನ್ನು ಜರೆಯಲಿಲ್ಲ. ಇದನ್ನು ಖಂಡಿತವಾಗಿ ಹೇಳುತ್ತೇನೆ. ತಾವು ಕೇಳುವುದಾದರೆ ನನ್ನ ಮಾತುಗಳನ್ನು ನಾನೇ ಹೇಳಿ ಬಿಡುತ್ತೇನೆ ಬುದ್ಧಿ. ಮೊನ್ನೆ ಸರಪಣಿ ಕಳಚಿಬಿಟ್ಟು ಜನಗಳನ್ನು ಚದುರಿಸುತ್ತಿದ್ದ ಅರಮನೆಯ ಸೊಕ್ಕಾನೆಯನ್ನು ನಾವಿಬ್ಬರೂ ಹಿಡಿದು, ತಂದು ಲಾಯದಲ್ಲಿ ಕಟ್ಟಿದೆವಷ್ಟೆ. ಆ ದಿನ ನಮಗೆ ಹಿಡಿಯಲಾರದಷ್ಟು ಸಂತೋಷವಾಯಿತು. ಇಂಥ ಸಾಹಸವಿದ್ದರೆ ಉಂಡ ಅನ್ನ ನಮಗೆ ಅರಗುತ್ತದೆ. ನಾವು ಈ ರಾಜ್ಯಕ್ಕೆ ಬಂದು ಎರಡು ಮೂರು ವರ್ಷಗಳಾದರೂ, ಬಡವರಾದ ನಮ್ಮಿಂದ ಯಾವ ತರದ ಪೌರುಷವೂ ಬೀಡಿಗೆ ಆಗಲಿಲ್ಲ. ಹಂದಿಯ ನವಿರು, ಹುಲಿಯ ಉಗುರು, ಆನೆಯ ದಂತ ಇವನ್ನು ತಂದು ಕಾಣಿಕೆ ಕೊಡೋಣವೆಂದರೆ, ತುಪ್ಪೆಕಲ್ಲಿನ ಕಾಡಿನಲ್ಲಿ ಕಾಲಿಡಲು ನಮಗೆ ಅಪ್ಪಣೆ ಇಲ್ಲ; ಕೊಳುಗುಳಕ್ಕೆ ಹೋಗಿ ಹಗೆಗಳನ್ನು ಚೆಂಡಾಡಿ ಅವರ ತಲೆಗಳನ್ನು ನಿಮ್ಮ ಪಾದಕ್ಕೆ ಒಪ್ಪಿಸೋಣವೆಂದರೆ, ನಮಗೆ ರಣವೀಳ್ಯವನ್ನು ಕೊಟ್ಟಿಲ್ಲ. ಹೀಗೆ ನಮಗೆ ಇಲ್ಲಿ ಉಂಡ ಉಣಿಸು ಕುತ್ತವಾಗಿದೆ. ಕುಡಿದ ನೀರು ಪಿತ್ತವಾಗಿದೆ. ಉಟ್ಟಬಟ್ಟೆ ಕೊಳೆಯಾಗಲಿಲ್ಲ. ಹಿಡಿದ ಕತ್ತಿ

ಮಾಸಲಿಲ್ಲ. ಈ ಮಾತು ದೂಷಣೆಯಾದರೆ ಈ ಕತ್ತಿ ಇದೆ. ನನ್ನ ಕೊರಳೂ ಇದೆ" ಎಂದು ಹೇಳಿ ಬಲ್ಲಾಳನ ಮುಂದುಗಡೆ ಕತ್ತಿ ಇಟ್ಟು ಕತ್ತನ್ನು ಬಾಗಿಸಿ ನಿಂತನು.

ದೇವಬಲ್ಲಾಳನು ಚೆನ್ನಯನ ವಚನಗಳನ್ನು ಕೇಳಿ, ಸುಮ್ಮನಾಗಿ "ಹೌದು ಬಂಟರೇ, ನಮ್ಮರಾಜ್ಯದಲ್ಲಿ ಬೇಟೆಗೀಟೆ, ಆಯನ ಅರಾಟ ಇರಬೇಕು. ಇವುಗಳ ಮೂಲಕ ಜನಗಳಲ್ಲಿ ಮೈಬಲವು ಬರುತ್ತದೆ; ಸಂಘಶಕ್ತಿಯು ಬೆಳೆಯುತ್ತದೆ. ಆದರೆ ತುಪ್ಪಕಲ್ಲು ಕಾಡಿನಲ್ಲಿ ಬೇಟೆಯಾಡಿದರೆ ನಾವು ಪಂಜದವರನ್ನು ಕೊಳುಗುಳಕ್ಕೆ ಕೂಗಿ ಕರೆದಂತಾಗುವುದು. ಅದಕ್ಕಾಗಿಯೇ ಹಿಂದುಮುಂದು ನೋಡುತ್ತಲಿದ್ದೇವೆ, ಬಂಟರೇ" ಎಂದನು.

ಆಗ ಚೆನ್ನಯನು "ಬುದ್ಧಿ, ಕಾಡುಮೃಗಗಳ ಬಾಧೆಯಿಂದ ಜನಗಳನ್ನು ತಪ್ಪಿಸುವುದು ನಮ್ಮ ಕಾರ್ಯ, ಆ ಕರ್ಯಸಾಧನೆಯಲ್ಲಿ ಯಾವ ತೊಂದರೆ ಬಂದರೂ ಹಿಮ್ಮೆಟ್ಟಲಾಗದು" ಎಂದನು.

"ಹಾಗಾದರೆ ತುಪ್ಪೆಕಲ್ಲಡವಿಯ ಬೇಟೆ ಆಗಲಿ" ಎಂದು ಬಲ್ಲಾಳನು ಅಪ್ಪಣೆ ಕೊಡಿಸಿ, "ಚೆನ್ನಯ, ಈ ಚಾಡಿಗಾರನನ್ನು ಏನು ಮಾಡಬೇಕು? ಇವನಿಗೆ ತಕ್ಕ ಶಿಕ್ಷೆ ಯಾವುದು?" ಎಂದು ಕೇಳಿದನು. ಆಗ ಚೆನ್ನಯನು "ಬುದ್ಧಿ, ಅವನಲ್ಲಿ ನನ್ನ ಕತ್ತಿ ನೆನೆಯುವಷ್ಟು ರಕ್ತವಿಲ್ಲ. ಕೊತ್ತಿ ತಿನ್ನುವಷ್ಟು ಮಾಂಸವಿಲ್ಲ, ಅವನನ್ನು ಬಿಟ್ಟುಬಿಡಿ" ಎಂದನು.

ಮೇಲಿನ ಸಂಭಾಷಣೆಯಾದ ಕೆಲವು ದಿನಗಳಲ್ಲಿಯೇ ಓಲೆಗಳನ್ನು ಬರಿಸಿ ಬೇಟೆಗೆ ಬೇಕಾದ ಸನ್ನಾಹಕ್ಕಾಗಿ ಕಡಲ ಬಳಿಯ ಬೊಕ್ಕಪಟ್ಟಣದಿಂದ ಬಗೆಬಗೆಯ ಬಲೆಗಳನ್ನು ತರಿಸಿದ್ದಾಯಿತು; ಗಟ್ಟದ ಮೇಲಿಂದ ನಾನಾ ಜಾತಿಯ ಬೇಟೆನಾಯಿಗಳನ್ನು ಒದಗಿಸಿಕೊಂಡದ್ದಾಯಿತು. ತರುವಾಯ ಒಂದು ದಿನ ಬೆಳಗ್ಗೆ ಜನಗಳ ಗುಂಪೊಂದು ಬಿಲ್ಲುಬಾಣಗಳನ್ನೂ ಕತ್ತಿಕೋವಿಗಳನ್ನೂ ಕೊಂಬುಕಹಳೆಗಳನ್ನೂ ಹಿಡಿದುಕೊಂಡು, ನಾಯಿಗಳ ಸಮೇತ ತುಪ್ಪೇಕಲ್ಲು ಕಾಡನ್ನು ನುಗ್ಗಿತು.

ಆ ಬೇಟೆಗಾರರು ಬಹಳ ಹೊತ್ತಿನ ತನಕ ಕಾಡು ಎಬ್ಬಿದರೂ ಬೂದು ಕಣ್ಣಿನ ಮೊಲ, ಪಜ್ಜೆಕಾಲಿನ ಜಿಂಕೆ, ಕೊಬ್ಬಿದ ಹಂದಿ, "ಕುಟುರುವ ಕುಡುಮುಲು ಹಕ್ಕಿ- ಯಾವುದೊಂದೂ ಏಳಲಿಲ್ಲ. ತರುವಾಯ ಅವರು ಬಲ್ಲೆ ಇದ್ದಲ್ಲಿ ಕಲ್ಲು, ಕಂಡಿ ಇದ್ದಲ್ಲಿ ಜನ, ಮೈದಾನ ಇದ್ದಲ್ಲಿ ನಾಯಿ ಹೀಗೆ

ಮೇಳಯಿಸಿಕೊಂಡು ಕಾಡಿಗೆ ಮುತ್ತಿಗೆ ಹಾಕಿದರು. ಸುಮಾರು ಎರಡು ತಾಸುಗಳವರೆಗೆ ಸುಮ್ಮನೆ ಕಾದು ನಿಂತರು. ಯಾವುದೊಂದಾದರೂ ನೆಲದ ಮೇಲೆ ಓಡಿದಂತೆ, ಇಲ್ಲವೆ ಮರದ ಮೇಲೆ ಹತ್ತಿದಂತೆ, ಇಲ್ಲವೆ ಆಕಾಶದಲ್ಲಿ ಹಾರಿದಂತೆ ತೋರಲಿಲ್ಲ. ಅನಂತರ ಒಂದು ಕಡೆಯಲ್ಲಿ ನೆಲ ಹಿಡಿದು ಎಳೆಯವರೆಗೆ ಎಬ್ಬುವಾಗ ಆಳುದ್ದ ಕಪ್ಪು ತೋರಿತು. “ಆನೆಗೆ ಕಿರಿದು, ಕುದುರೆಗೆ ಹಿರಿದು” ಎಂದು ಒಬ್ಬನು ಮರಗಳ ಹಿಂದಿನಿಂದ ಮತ್ತೊಬ್ಬನಿಗೆ ಕೈಸನ್ನೆ ಮಾಡಿದನು. ಒಡನೆ ಅದು ದಡಕ್ಕೆಂದು ಎದ್ದು, ಡುರುಕ್ಕೆಂದು ಕೂಗಿ. ಮುಸುಡು ಆಡಿಸಿದ್ದನ್ನು ಕಂಡು ಚೆನ್ನಯನು “ಇದಿರಿಗೆ ಬಂದದ್ದು ಎಂಥಾದ್ದು, ಕೋಟಿ?” ಎಂದು ಕೇಳಿದನು.

ಅಷ್ಟರಲ್ಲಿ ಆ ಕಾಡು ಹಂದಿಯು ನವಿರುಗಳನ್ನು ನಿಗುರಿಸಿ, ಮಳೆಗಾಲದ ಗುಡುಗಿನಂತೆ ಮೊರೆಯುತ್ತ. ಮಿಂಚಿನಂತೆ ತನ್ನ ಕೋರೆ ಹಲ್ಲುಗಳನ್ನು ಜಳಪಿಸುತ್ತ, ಗಾಳಿಯ ವೇಗದಿಂದ ಕೋಟಿಗೆ ಎದುರಾಗಿ ಬರುತ್ತಿತ್ತು “ಓಡೋಣವೇ ಬಂಟರ ಮಾನದ ಮೇಲೆ ಬರುತ್ತದೆ. ನಿಲ್ಲೋಣವೇ ಪ್ರಾಣದ ಮೇಲೆ ಬರುತ್ತದೆ”-ಈ ಪ್ರಕಾರವಾಗಿ ಕೋಟಿಯ ಮನಸ್ಸು ತೂಗುತ್ತಲಿತ್ತು. ಅರೆನಿಮಿಷದಲ್ಲಿ ಅವನ ಬಲಗೈ ಬಾಣವು ಎಡಗೈಯ ಬಿಲ್ಲನ್ನು ಬಿಟ್ಟು ಹಾರಿ, ಹಂದಿಯ ಮುಖದಲ್ಲಿ ಮುರುಟಿಕೊಂಡು ಬೆನ್ನಲ್ಲಿ ಹೊರಟಿತು. ಹಂದಿಯ ಒರಳಾಟವು ನಾಕಲೋಕಕ್ಕೆ ಮುಟ್ಟಿತು; ಹೊರಳಾಟವು ನಾಗಲೋಕಕ್ಕೆ ಹೋಯಿತು. “ಹಂದಿಯನ್ನು ಅಣ್ಣನು ಕೊಂದನೋ, ಅಣ್ಣನನ್ನು ಹಂದಿ ಕೊಂದಿತೋ” ಎಂಬ ಸಂದೇಹದಿಂದ ಚೆನ್ನಯನು ಮುಂದೋಡಿ ಬಂದು ಕೇಳಿದನು. ಕೋಟಿಯು ತನ್ನ ಕೈಬೆರಳಿಂದ ತೋರಿಸಿದನು. ಹುಲ್ಲು ಎಲೆಗಳ ರಾಶಿಯ ಮೇಲೆ ಆನೆಮರಿಯಂತೆ ಭಯಂಕರವಾಗಿ ಬಿದ್ದಿದ್ದ ದೊಡ್ಡ ಕಾಡುಹಂದಿಯನ್ನು ಚೆನ್ನಯನು ತನ್ನ ಎಡಗಾಲಿಂದ ಮೆಟ್ಟಿದನು. ಕೂಡಲೇ ಆ ಹಂದಿಯು ಮುಚ್ಚಿದ್ದ ಕಣ್ಣನ್ನು ಅರೆತೆರೆದು, ಬಾಲವನ್ನು ಪಿಟ್ಟನೆ ಅಲುಗಿಸಿ, ಮೈ ಕೊಡವಿ, ಅರೆನಿಮಿಷದಲ್ಲಿ ಎದ್ದೋಡಿತು. ಚೆನ್ನಯನು ಅದನ್ನು ಬೆನ್ನಟ್ಟಿಕೊಂಡು ಹೋದನು. ಅವನ ಹಿಂದುಗಡೆ ಉಳಿದವರೆಲ್ಲರೂ ಓಡತೊಡಗಿದರು.

ಹಂದಿಯು ಓಡುತ್ತ ಓಡುತ್ತ. ತುಪ್ಪೆಕಲ್ಲ ಮಲೆಯನ್ನು ದಾಟಿ, ಪಂಜಸೀಮೆಯ ಅಡ್ಡಕ್ಕೆ ಹೋಗಿ, ಫಕ್ಕನೆ ತಿರುಗಿ, ಚೆನ್ನಯನಿಗೆ ಇದಿರಾಗಿ ಬಂತು. ಚೆನ್ನಯನು ತನ್ನ ಉರವಣೆಯನ್ನು ನಿಲ್ಲಿಸಿ, ಕಣ್ಣು ಮುಚ್ಚುವಷ್ಟರಲ್ಲಿ ತನ್ನ ಎರಡು ಕತ್ತಿಗಳನ್ನೂ ಮುಂದಕ್ಕೆ ಹಿಡಿದು, ಹಂದಿಗೆ ಎದುರಾಗಿ ನಿಂತನು. ಹಾಯ್ದು ಬರುವ ಹಂದಿಯು ಎರಡು ಪಕ್ಕಗಳು ಚೆನ್ನಯನು ಒತ್ತಿಹಿಡಿದಂಥ ಕತ್ತಿಗಳಿಂದ

ಸಿಳ್ಳನೆ ಸೀಳಲ್ಪಟ್ಟು, ಆ ಹಂದಿಯು ಮುಂದುವರಿಸಲಾರದೆ ಅವನ ಕೈಬಳಿಯಲ್ಲಿಯೇ ರಕ್ತದ ಹೊನಲಿನಲ್ಲಿ ಹೊರಳಾಡಿ ಪ್ರಾಣಬಿಟ್ಟಿತು. ಹಂದಿಯ ತಿವಿತದಿಂದ ಮಾಂಸವೂ ರಕ್ತವೂ ಹೋಗಿ, ಚೆನ್ನಯನ ಬರೇ ಎಲುಬುಗಳು ಮಾತ್ರ ಅವನ ಕೈಗಳಿಂದ ತೂಗುತ್ತಿದ್ದವು.

ಹಂದಿಯು ಪ್ರಾಣಬಿಟ್ಟ ಹೊತ್ತಿಗೆ ಸರಿಯಾಗಿ ಪಂಜದ ಸೀಮೆಯವರು ಅಲ್ಲಿಗೆ ಬಂದು ಮುಟ್ಟಿದರು. ಬೇಟೆಗಾರರ ಬೆಳಗಿನ ಕೋಲಾಹಲವನ್ನು ಕೇಳಿ ಚೆಂದುಗಿಡಿಯು ಅವರನ್ನು ಮೊದಲೇ ಕಳುಹಿಸಿದ್ದರೂ ಎಣ್ಮೂರಿನವರು ಯಾವ ಕಾಡನ್ನು, ಯಾವ ಕುಂಜವನ್ನು ಎಬ್ಬುತ್ತಾರೆಂದು ತಿಳಿಯದೆ, ಅವರು ಸುತ್ತಾಡಿ ಸುತ್ತಾಡಿ ಕಟ್ಟಕಡೆಗೆ ಇಲ್ಲಿಗೆ ಬಂದು ಕೂಡಿದರು.

ಅವರ ಕಡೆಯ ಮುಖ್ಯಸ್ಥನೊಬ್ಬನು “ಈ ಹಂದಿ ನಮ್ಮ ಸೀಮೆಯಲ್ಲಿ ಬಿದ್ದಿದೆ. ನಮ್ಮ ಗಡಿಯಲ್ಲಿದ್ದುದನ್ನು ನಾವು ಕೊಡಲಿಕ್ಕಿಲ್ಲ. ಹಂದಿಯ ತಲೆಬಾಲಗಳನ್ನು ಕೊಟ್ಟಹೋಗು. ಇಲ್ಲದಿದ್ದರೆ ನಾವು ಹಂದಿಯನ್ನು ಒಯ್ಯುತ್ತೇವೆ” ಎಂದು ಹೇಳಿ, ಗಟ್ಟಿಯಾದ ಬೀಳುಗಳನ್ನು ತರಿಸಿ, ಹಂದಿಯ ಸೊಂಟಕ್ಕೆ ಸಿಕ್ಕಿಸಿ, ತನ್ನ ಕಡೆಯ ಆಳುಗಳಿಂದ ಅದನ್ನು ಎಳೆಯಿಸಿದನು.

ಗಾಯಗಳಿಂದ ಬಹಳ ಗಾಸಿಕೊಂಡಿದ್ದ ಚೆನ್ನಯನು ಎದ್ದುನಿಂತು, “ಅಣ್ಣಾ ಏನು ನೋಡುತ್ತೀರಿ? ಈಗ ಈ ಹಂದಿಗೆ ಗೆಲುವು ಹೇಳುತ್ತೀರೋ? ಇಲ್ಲವೆ ಪಂಜದ ಮುನ್ನೂರು ಆಳಿಗೆ ಇದಿರಾಗುತ್ತೀರೋ?” ಎಂದು ಕೇಳಿದನು.

ಕೋಟಿಯು “ಚೆನ್ನಯ, ಮುಂದರಿಸಬೇಡ, ನಾನು ಒಮ್ಮೆ ಒಡಂಬಡಿಸುತ್ತೇನೆ” ಎಂದು ಹೇಳಿ “ನಾವು ಕೊಂದ ಹಂದಿ ನಮ್ಮದಲ್ಲವೇ?” ಎಂದು ಪಂಜದವರ ಹತ್ತಿರ ನ್ಯಾಯಕ್ಕೆ ಹೊರಟನು.

ಅಷ್ಟರಲ್ಲಿ ಪಂಜದವರು ಬೀಳುಹಾಕಿ ಹಂದಿಯನ್ನು ಎಳೆದುಕೊಂಡು ಹೋಗಲು ಸಿದ್ಧವಾಗಿದ್ದುದನ್ನು ಕಂಡು ಚೆನ್ನಯನು ತನ್ನ ನಡುವಿಗಿದ್ದ ಬೆಳ್ಳಿಯ ಜೋಡೆಳೆಯ ಉಡುದಾರವನ್ನು ಈಚೆಗೆ ತೆಗೆದು, ಹಂದಿಯ ಎರಡು ದಾಡೆಗಳಲ್ಲಿ ಸಿಕ್ಕಿಸಿ, ಅದನ್ನು ಒಬ್ಬನೇ ಹಿಂದಕ್ಕೆ ಸೆಳೆದು, ಪಂಜಕ್ಕೂ ಎಣ್ಮೂರಿಗೂ ನಡುವೆ ಇರುವ ಮಂಜುಳಪಾದೆ ಎಂಬ ಸ್ಥಳಕ್ಕೆ ಸರಸರನೆ ಒಯ್ದುತಂದನು. ಆನಂತರ ಇಕ್ಕಡೆಯವರಿಗೆ ಹೊಯ್‌ಕಯ್ ಆಯಿತು. ಕೋಟಿಚೆನ್ನಯರು ಆ

ಮುನ್ನೂರು ಆಳುಗಳಲ್ಲಿ ಹಲವರನ್ನು ಸುಗ್ಗಿಬೆಳೆಯ ಹುಲ್ಲು ಸೂಡಿಗಳನ್ನು ಗಾಳಿಯು ಮಗುಚುವಂತೆ ಅಡ್ಡಹಾಕಿದರು. ಅಳಿದುಳಿದವರು ಪ್ರಾಣವನ್ನು ಕೈಯಲ್ಲಿ ಹಿಡಿದುಕೊಂಡು, ಬೆನ್ನುಕೊಟ್ಟು ಓಡಿದರು.

ತರುವಾಯ ಹಂದಿಯನ್ನು ಸೀಳಿದ್ದಾಯಿತು; ಎಣ್ಮೂರು ಬಲ್ಲಾಳನ ಅಪ್ಪಣೆ ಪ್ರಕಾರ ಎಲ್ಲರಿಗೂ ಮಾಂಸವನ್ನು ಹಂಚಿದ್ದಾಯಿತು; ಕೋಟಿಚೆನ್ನಯರು ಬೇಟೆಯ ಆಯಾಸವನ್ನು ಎಣ್ಣೆಯ ಸ್ನಾನದಿಂದ ಕಳೆದದ್ದಾಯಿತು. ಒಂದು ವಾರದೊಳಗೆ ಅವರ ಮೈಗಾಯಗಳೆಲ್ಲ ವಾಸಿಯಾಗಿ ಅವರ ಭುಜಗಳು ಮತ್ತೆ ಕುದುರುವುದಕ್ಕೆ ತೊಡಗಿದುವು.

ಇತ್ತ ಎಣ್ಮೂರಿನ ಮೇಲೆ ದಂಡೆತ್ತಿ ಹೋಗಬೇಕೆಂದು ಹವಣಿಸುತ್ತಿದ್ದ ಪೆರುಮಾಳು ಬಲ್ಲಾಳನಿಗೂ ಚೆಂದುಗಿಡಿಗೂ ಈ ಬೇಟೆಯಿಂದ ಒಂದು ನೆಪವು ದೊರೆಯಿತು. ಪೆರುಮಾಳು ಎಣ್ಮೂರನ್ನು ಕಾವೇರಿ ಸಂಕ್ರಮಣದೊಳಗೇನೇ ಪುಡಿಪುಡಿ ಮಾಡಬೇಕೆಂದು ಇದ್ದನು. ಆದರೆ ಪಂಜದಲ್ಲಿ ಕೊಳುಗುಳಕ್ಕೆ ಬೇಕಾದ ಸಾಮಾಗ್ರಿಗಳು ಒದಗದೆ ಇದ್ದುದರಿಂದಲೋ ಅಥವಾ ಕೇಮರ ಬಲ್ಲಾಳನ ಬುದ್ಧಿಯು ಕೆಸರುಗದ್ದೆಯ ಕಂಬದಂತೆ ಇದ್ದುದರಿಂದಲೋ ಇಲ್ಲವೆ ಇನ್ನು ಯಾವ ಕಾರಣದಿಂದಲೋ ತುಲಾ ಸಂಕ್ರಾಂತಿಯು ಕಳೆದರೂ ಯುದ್ಧದ ಸಿದ್ಧತೆ ಆಗಲಿಲ್ಲ. ಅದಕ್ಕಾಗಿ ಪೆರುಮಾಳು ಬಲ್ಲಾಳನು ಇರುಳಲ್ಲಿ ನಿದ್ದೆಯಿಂದ ಎದ್ದೆದ್ದು ಕನವರಿಸುತ್ತಿದ್ದವು. ಆತನು ಪಂಜದ ಮುನ್ನೂರು ಆಳುಗಳ ಮೋರೆಗೆ ಮಸಿಯಾದ ವಾರ್ತೆಯನ್ನು ಕೇಳಿ, ಅದಕ್ಕೆ ತಕ್ಕುದಾದ ಮುಯ್ಯನ್ನು ಎಣ್ಮೂರು ಬಲ್ಲಾಳನಿಗೆ ಮಾಡಬೇಕೆಂದು ಚೆಂದುಗಿಡಿಗೆ ಸೂಚಿಸಿದನು. ಹೀಗೆ ಪೆರುಮಾಳು ಬಲ್ಲಾಳನು ಕೊಟ್ಟ ಧೈರ್ಯದಿಂದ ಉಬ್ಬಿ ಚೆಂದುಗಿಡಿಯು ಪರಿಹಾಸ್ಯಕರವಾದ ಒಂದು ಬಗೆಯ ಒಕ್ಕಣೆಯ ಓಲೆಯನ್ನು ಎಣ್ಮೂರಿಗೆ ಕಳುಹಿಸಿದನು.

ತುಲಾ ಸಂಕ್ರಾಂತಿಯು ಕಳೆದ ಏಳನೆಯ ದಿನ ಈ ಪತ್ರವು ಎಣ್ಮೂರಿಗೆ ಬಂದು ಮುಟ್ಟಿತು. ದೇವ ಬಲ್ಲಾಳನು ಬೀಡಿನಲ್ಲಿ ಓಲಗವಾಗಿದ್ದನು. ಎಡದ ಮೈಯಲ್ಲಿ ಕಿನ್ನಿಚೆನ್ನಯ, ಬಲದ ಮೈಯಲ್ಲಿ ಕೋಟಿ ಚೆನ್ನಯ, ಮುಂದುಗಡೆಯಲ್ಲಿ ಹದಿನೆಂಟು ಪೇಟೆಯ ಮನ್ನೆಯರು, ಹಿಂದುಗಡೆಯಲ್ಲಿ ಚಾಮರ ಬೀಸುವ ಕನ್ನೆಯರು, ಹೀಗೆ ಸಕಲ ವಿಲಾಸವೈಭವಗಳ ಒಡ್ಡೋಲಗದಲ್ಲಿ ಒಪ್ಪುತ್ತಿರುವ ಎಣ್ಮೂರು ದೇವಬಲ್ಲಾಳನ ಸಮಕ್ಷದಲ್ಲಿ ಪಂಜದ ಹರಿಹಾರನು ತಂದಿದ್ದ ಓಲೆಯನ್ನು ಬೀಡಿನ ಸೇನಬೋವನು ಓದಿದನು.

ಅದೆಂತೆಂದರೆ-

ಶ್ರೀಮತ್ತು ಪಂಜ ಬೀಡಿನ ಬಲ್ಲಾಳ ಪಟ್ಟದಲ್ಲಿ ಅಭಿಕ್ತರಾದ ಪಂಜ ಸಂಸ್ಥಾನದ ಶ್ರೀ ಕೇಮರ ಬಲ್ಲಾಳನು ಎಣ್ಮೂರು ಬೀಡಿನ ದೇವಬಲ್ಲಾಳರಿಗೆ ಬರೆಯಿಸಿದ ಪತ್ರವೇನೆಂದರೆ- ಸ್ವಸ್ತಿ ಶ್ರೀ ಜಯಾಭ್ಯುದಯ ಶಾಲಿವಾಹನಶಕ ವರ್ಷ ೧೭೧೭ನೆಯ ಶ್ರೀಮುಖ ಸಂವತ್ಸರದ ತುಲಾಮಾಸ ದಿನ ೨೫ರ ವರೆಗೆ ಉಭಯ ಕುಶಲೋಪರಿ. ತರುವಾಯ ನಮ್ಮ ನಿಮ್ಮ ಉಭಯ ರಾಜ್ಯಗಳನ್ನು ವಿಂಗಡಿಸಲಿಕ್ಕಾಗಿ ಪ್ರಾಕಾರಬ್ಧ ಹಾಕಿದ್ದ ಗಡಿಕಲ್ಲುಗಳನ್ನು ನಿಮ್ಮ ಕಡೆಯ ದುರ್ಮನುಷ್ಯರು ಕಿತ್ತು ಹಾಕಿ ನಮ್ಮ ಸಂಸ್ಥಾನದ ಸರಹದ್ದುಗಳನ್ನು ಬೇರ್ಪಡಿಸಿದ್ದಾರೆಂಬುದಾಗಿಯೂ, ನಮ್ಮ ಅಪ್ಪಣೆಯಿಲ್ಲದೆ ನಮ್ಮ ಸಂಸ್ಥಾನಕ್ಕೆ ಸೇರಿದ್ದ ಬೈಲುಭೂಮಿಯನ್ನು ಬಲಕಾಯಿಸಿದ್ದಾರೆಂಬುದಾಗಿಯೂ, ಇತ್ತಲಾಗೆ ನಮ್ಮ ಕಾಡನ್ನು ಒಳನುಗ್ಗಿ ನಮ್ಮೊಡನೆ ಹೇಳದೆ ಕೇಳದೆ ಹಂದಿಯನ್ನು ಬೇಟೆಯಾಡಿ ನಮ್ಮ ಕಡೆಯವರ ಮಾತನ್ನು ಮೀರಿ ಅದನ್ನು ಎಳೆದುಕೊಂಡು ಹೋಗಿದ್ದಾರೆಂಬುದಾಗಿಯೂ ನಮ್ಮ ಚಿತ್ತಕ್ಕೆ ಬಂದುದರಿಂದ, ಈ ವಿವಾದಾಂಶಗಳು ಸರಿಯಾಗಿ ಇತ್ಯರ್ಥವಾಗುವುದಕ್ಕೆ ಮುಂಚಿತವಾಗಿ ನಮ್ಮ ಕಾಡಿನಲ್ಲಿ ಕೊಂದಿದ್ದ ಹಂದಿಯ ತಲೆಬಾಲಗಳನ್ನು ಈ ಓಲೆ ತರುವವರ ಕೈಯಲ್ಲಿ ನಮ್ಮ ಸಮಾಧಾನಕ್ಕಾಗಿ ಕೂಡಲೇ ಕಳುಹಿಸಿಕೊಡತಕ್ಕದ್ದು, ಅವನ್ನು ಕಳುಹಿಸದ ಕಾಲಕ್ಕೆ ಆ ಹಂದಿಯನ್ನು ಕೊಂದವರನ್ನು ನಮಗೆ ಒಪ್ಪಿಸಿಕೊಡತಕ್ಕದ್ದು. ಅದು ಆಗದಿದ್ದರೆ ಬಲ್ಲಾಳರಾದ ನೀವು ಸೀರೆಯುಟ್ಟು, ರವಕೆ ತೊಟ್ಟು, ಬೀಡಿನ ಚಾವಡಿಯಲ್ಲಿ ತಲೆಬಾಗಿ ನಿಂತುಕೊಂಡಿದ್ದಲ್ಲಿ ಬಲ್ಲಾಳರಾದ ನಾವು ದಿಬ್ಬಣ ಸಮೇತ ಹೆಣ್ಣುಕೇಳಲು ಬರುವಂಥವರಿದ್ದೇವೆ.

ಹೀಗೆ ಸೇನಬೋವನು ಓದಿದ ಪತ್ರವನ್ನು ಕೇಳಿ ದೇವಬಲ್ಲಾಳನ ಬಾಯಿ ನೀರು ಆರಿಹೋಯಿತು. ಎರಡು ನಿಮಿಷಗಳ ವರೆಗೆ ಓಲಗದಲ್ಲಿ ಸದ್ದುಗಲುಗು ಇಲ್ಲದೆ ಮೌನವು ಕವಿಯಿತು.

“ಕಿನ್ನಿಚೆನ್ನಯ, ಓಲೆಯ ಒಕ್ಕಣೆ ಕಿವಿಯಲ್ಲಿ ಬಿತ್ತಷ್ಟೆ. ಇದಕ್ಕೆ ಏನು ಹೇಳುತ್ತಿ?” ಎಂದು ದೇವ ಬಲ್ಲಾಳನು ಕಿನ್ನಿಚೆನ್ನಯನ ಕಡೆಗೆ ಮೋರೆ ತಿರುಗಿಸಿ, “ಈ ಕೋಟಿಚೆನ್ನಯರ ಸಂಗತಿ

ಬಿಸಿಹಾಲಿನ ಗುಟುಕಿನಂತೆ ಒಳಗೆ ತೆಗೆದುಕೊಳ್ಳಲಿಕ್ಕೂ ಇಲ್ಲ, ಹೊರಗೆ ಉಗುಳಲಿಕ್ಕೂ ಇಲ್ಲ ಎಂಬಂತಾಗಿದೆ. ಏನು ಮಾಡೋಣ?" ಎಂದು ಕೇಳಿದನು.

ಕಿನ್ನಿಚೆನ್ನಯನು ಎದ್ದು "ಬುದ್ಧಿ" ಎಂದು ದೈನ್ಯದಿಂದ ನುಡಿದು, ಸುಮ್ಮನಾದನು.

ಆಗ ಕೋಟಿಯು "ಬುದ್ಧಿ, ಬೀಡಿನವರನ್ನು ಹುರಿಗೊಳಿಸತಕ್ಕ ತಾವೇ ಹೀಗೆ ಕಳವಳಿಸಿದರೆ ಮಾಡುವುದೇನು? ಬೆಂಕಿಗೆ ಚಳಿ ಹಿಡಿದರೆ, ನೀರಿಗೆ ಬಾಯಿ ಆರಿದರೆ, ಗಾಳಿಗೆ ಮೈ ಬೆವರಿದರೆ ನಿವಾರಿಸತಕ್ಕವರು ಯಾರು? ಇಂಥ ಪ್ರಸಂಗದಲ್ಲಿ ತಮ್ಮಂಥವರು ಸಾವಧಾನವಾಗಿ ವರ್ತಿಸಬೇಕಾಗಿದೆ" ಎಂದನು.

ಆಗ ಚೆನ್ನಯ್ಯನು "ಬುದ್ಧಿ, ನನ್ನಿಂದ ತಮಗಾಗಲಿ ತಮ್ಮ ರಾಜ್ಯಕ್ಕಾಗಲಿ ಅಪಾಯವು ಬರುವಂತಿದ್ದರೆ, ನಾನು ಈಗಲೇ ಹೊರಟೆ, ನನಗೆ ಅಪ್ಪಣೆ" ಎಂದು ಕೈಮುಗಿದು ನಿಂತುಕೊಂಡನು.

ದೇವಬಲ್ಲಾಳನು ಆ ಬಂಟರ ದೆಸೆಯಿಂದ ತನ್ನ ರಾಜ್ಯಕ್ಕೆ ಆಪತ್ತು ಒದಗುತ್ತದೆಂದು ತನ್ನ ಮನಸ್ಸಿನಲ್ಲಿಯೇ ನೆನೆಸಿ, ಅದನ್ನು ಬಾಯಿಬಿಟ್ಟು ಹೇಳಲಾರದೆ, ಉಸ್ಸೆಂದು ಒಮ್ಮೆ ಉಸಿರುಬಿಟ್ಟನು.

ಅದನ್ನು ಕಂಡು ಕೋಟಿಯು "ಬುದ್ಧಿ! ತಾವು ಚಿಂತೆ ಬಿಡಬೇಕು. ಇನ್ನು ಮನೆಗೆ ರಣವೀಳ್ಯವನ್ನು ಕೊಟ್ಟು ಕಳುಹಿಸಿದ್ದಲ್ಲಿ ನಾವು ಹಗೆಗಳನ್ನು ಎದುರ್ಗೊಂಡು ರಣರಂಗದಲ್ಲಿ ಅವರ ತಲೆಗಳನ್ನು ಚೆಂಡಾಡಿ, ಇಲ್ಲವೆ ನಮ್ಮ ಮೈರಕ್ತವನ್ನು ಚೆಲ್ಲಾಡಿ, ತಮ್ಮ ಋಣವನ್ನು ತೀರಿಸಬೇಕೆಂದು ಇದ್ದೇವೆ" ಎಂದು ಗಟ್ಟಿಯಾಗಿ ಹೇಳಿದನು.

ಹುರಿದುಂಬಿಸತಕ್ಕ ಈ ಮಾತುಗಳ ಗಾಳಿಯು ಬೀಸುತ್ತಲೇ ಅಲ್ಲಿದ್ದವರ ಗರ್ವೋದ್ರೇಕದಿಂದಲೂ ಭುಜಗಳ ಚಪ್ಪಾಳೆಯಿಂದಲೂ ಆಸ್ಥಾನವು ಕದಡಿದಂತಾಯಿತು. "ಸಿಟ್ಟೆಬ್ಬಿಸುವ ಓಲೆ!" 'ಸುಡುಗಾಡು ಓಲೆ!, ಸೊಕ್ಕಿನ ಓಲೆ!' ಎಂಬ ಬಿರುನುಡಿಗಳು ಬಾಯಿಂದ ಬಾಯಿಗೆ ಹಾರಿದುವು. ಒಬ್ಬೊಬ್ಬರು ಆ ಓಲೆಕಾರನ ಮೇಲೆ ಕೈ ಮಾಡುವುದಕ್ಕೆ ಹೋದರು. ಕೋಟಿಯು ಬೇಡಬೇಡವೆಂದು ಎಷ್ಟು ತಡೆದರೂ, ಬೀಡಿನ ಮಂಜು ಪೆರ್ಗಡೆ ಎಂಬವನು ಆ

ಓಲೆಯ ಕಡೆಕುಡಿ ಕತ್ತರಿಸಿ, ಅದನ್ನು ಓಲೆಕಾರನ ಕೊರಳಿಗೆ ಕಟ್ಟಿ, ಅವನನ್ನು ಬೈದು ಭಂಗಿಸಿ ಚಾವಡಿಯಿಂದ ಹೊರಕ್ಕೆ ದಬ್ಬಿ. ಅವಮಾನ ಮಾಡಿ ಕಳುಹಿಸಿಬಿಟ್ಟನು.

ಹೀಗೆ ಮೋರೆಗೆ ಮಂಗಳಾರತಿಯಾಗಿ ಪಂಜಕ್ಕೆ ಹಿಂದೆರಳಿದ ತನ್ನ ಕಡೆಯ ಹರಿಕಾರನನ್ನು ಕಂಡು ಚೆಂದುಗಿಡಿಯು ಅತ್ಯಂತ ಕೋಪಾಟೋಪದಿಂದ ಕೇಮರ ಬಲ್ಲಾಳನ ಬಳಿಗೆ ಹೋಗಿ, ಎಣ್ಮೂರಿನ ಮೇಲೆ ದಾಳಿವರಿದು ಹೊರಡುವುದಕ್ಕೆ ಎಲ್ಲವೂ ಸಿದ್ಧವಾಗಿರಬೇಕೆಂದು ಅಪ್ಪಣೆಕೊಡಿಸಿ. ತಾನು ಸ್ವತಃ ಪಡುಮಲೆಗೆ ಬೇಗನೆ ಹೋಗಿ, ತೂಕಡಿಸುತ್ತಲಿದ್ದ ಪೆರುಮಾಳು ಬಲ್ಲಾಳನನ್ನು ಎಚ್ಚರಿಸಿ, ಸೇನಾಸಮೇತನಾಗಿ ಪಂಜದವರ ಪಕ್ಷವನ್ನು ಸೇರಿಕೊಳ್ಳುವಂತೆ ಆತನ ಸಹಾಯವನ್ನು ಅಪೇಕ್ಷಿಸಿದನು.

ತುಲಾಮಾಸವು ಕಳೆದು ವೃಶ್ಚಿಕ ಮಾಸವು ತಲೆದೋರಿ ಹತ್ತುದಿನಗಳು ದಾಟಿ ಹೋದುವು. ಗದ್ದೆಗಳಲ್ಲಿದ್ದ ಬೆಳೆ ಒಕ್ಕಲಿಗನ ಅಂಗಳದಲ್ಲಿ ಮೊದಲೇ ಬೆಚ್ಚಗೆ ಸೇರಿಕೊಂಡಿತ್ತು. ನೀರಿದ್ದ ಕಡೆಗಳಲ್ಲಿ ಸುಗ್ಗಿಯ ಬೆಳೆಯು ಒಂದೂವರೆ ಗೇಣು ಮೇಲೆ ಬಂದಿತ್ತು. ಹಿಂಗಾರು ಮಳೆಯು ಬಾರದೆ ಆಕಾಶವು ತಿಳಿಯಾಗಿತ್ತು. ಮಳೆಗಾಲದಲ್ಲಿ ಉಡುಗಿ ಹೋಗಿದ್ದ ಕ್ರಿಯಾಕಲಾಪಗಳು ಈ ಮೊದಲೇ ಸರಾಗವಾಗಿ ನಡೆಯ ತೊಡಗಿದ್ದುವು. ಬೆಟ್ಟದ ತೊರೆಗಳಲ್ಲಿ ನೀರು ಕಡಿಮೆಯಾದುದರಿಂದ, ಹೋರಾಟದ ಎತ್ತುಗಳು ಗಟ್ಟದ ಸರಕನ್ನು ತುಳುನಾಡಿಗೆ ಹೊತ್ತುಕೊಂಡು ಬರುವುದಕ್ಕೆ ಪ್ರಾರಂಭವಾಗಿತ್ತು. ತುಳುನಾಡಿನ ಅತ್ಯಂತ ಪ್ರಸಿದ್ಧವಾದ ಸುಬ್ರಹ್ಮಣ್ಯ ಜಾತ್ರೆಯು ಸಮೀಪಿಸಿತ್ತು.

ಜಾತ್ರೆಗೆ ನಾಲ್ಕು ದಿವಸ ಮುಂಚಿತವಾಗಿ ಪೆರುಮಾಳು ಬಲ್ಲಾಳನು ಮಂದಿ ಮಾರ್ಬಲದೊಡನೆ ಪಡುಮಲೆಯಿಂದ ತೆರಳಿ, ಪೆರ್ಲಂಪಾಡಿಯ ಮಾರ್ಗವಾಗಿ ಹೋಗಿ ಎರುಕಡಪಿನ ಹತ್ತಿರ ಬಂದು ಇಳಿದನು. ಪಂಜದ ಕೇಮರ ಬಲ್ಲಾಳನ ಜನಗಳು ಸಾಮಾನುಸರಂಜಾಮನ್ನು ಶೇಖರಿಸಿಕೊಂಡು ಕಡವಿನ ಆಚೆಗೆ ಇದ್ದರು; ಕೇಮರನ ಇನ್ನೊಂದು ದಂಡು ಎಣ್ಮೂರಿನ ಸರಹದ್ದಿನ ಕಂಡಿಕಣಿವೆಗಳನ್ನು ಕಟ್ಟಿ, ರಸ್ತುಮಸ್ತೈದೆಗಳು ಎಣ್ಮೂರಿಗೆ ಹೋಗುವುದನ್ನು ನಿಲ್ಲಿಸಿ ಬಿಟ್ಟಿತ್ತು. ಈ ಸೈನ್ಯವು ಕಳ್ಳದಾರಿಯಾಗಿ ಬಂದು ತನ್ನ ರಾಜ್ಯದ ಗಡಿಗಳಲ್ಲಿ ಬಲಕಾಯಿಸಿ ನಿಂತಿದ್ದ ಸುದ್ದಿಯು ಜಾತ್ರೆಯ ಮುಂಚಿನ ದಿವಸ ಎಣ್ಮೂರಿನ ದೇವಬಲ್ಲಾಳನಿಗೆ

ಗೊತ್ತಾಗಿ ಅವನು ೫೦೦ ಮಂದಿಯನ್ನು ಎಣ್ಮೂರು ದೇವಸ್ಥಾನದ ಮುಂದುಗಡೆಯ ಬೈಲಿನಲ್ಲಿ ನಿಲ್ಲಿಸಿ, ಜಗಳ ಮಾಡುವುದಕ್ಕೆ ಸಿದ್ಧವಾದನು.

ಯುದ್ಧದ ಸಿದ್ಧತೆಯನ್ನು ಕಂಡು ಕೇಳಿದ ಜನಗಳು ತಮ್ಮ ಬದುಕು ಬಾಳನ್ನೂ ದನಕರುವನ್ನೂ ದೂರಕ್ಕೆ ಸಾಗಿಸಲು ಪ್ರಯತ್ನಿಸಿದರು; ಚಿನ್ನ ಬೆಳ್ಳಿ ಇದ್ದವರು ಅದನ್ನು ನೆಲಮರೆ ಮಾಡಿಕೊಂಡು ತಮ್ಮ ಮನೆಗಳನ್ನು ಕಾದುಕೊಂಡಿದ್ದರು; ಮರ್ದಾಳ ಸೀಮೆಯ ರೈತರು ಲೂಟಿಯ ಭಯದಿಂದ ತಮ್ಮ ಹೆಂಡತಿ ಮಕ್ಕಳು ಆದಿಯಾಗಿ ಸರ್ವಸ್ವವನ್ನೂ ಕೊಕ್ಕಡದ ಮಾರ್ಗವಾಗಿ ಸಾಗಿಸಿಬಿಟ್ಟರು.

ಮಾರ್ಗಶಿರ ಶುದ್ಧ ಷಷ್ಠಿಯ ದಿನ ಸೂರ್ಯೋದಯಕ್ಕೆ ಸರಿಯಾಗಿ ದೇವಬಲ್ಲಾಳನು ಕೋಟಿಚೆನ್ನಯರಿಗೆ ತೊಡವು ತಾಂಬೂಲವನ್ನು ಕೊಟ್ಟು ತನ್ನ ಸೈನ್ಯಕ್ಕೆ ಅವರನ್ನು ಮುಖಂಡರನ್ನಾಗಿ ಮಾಡಿ, ಅವರ ಆಜ್ಞಾನುಸಾರವಾಗಿ ನಡೆಯುವುದಕ್ಕೆ, ಕೋಟಿ ಚೆನ್ನಯರು ಸೈನ್ಯದ ಜನದಲ್ಲಿ ಬೀಡಿನ ಪಹರೆಗೂ, ಎಣ್ಮೂರಿನ ಚೌಸುತ್ತಿನ ಕಾವಲಿಗೂ, ಬಲ್ಲಾಳನ ಚಾಕರಿಗೂ ಬೇಕಾದಷ್ಟು ಮಂದಿಯನ್ನು ವಿಂಗಡಿಸಿ, ಉಳಿದ ಅರೆವಾಸಿ ಮಂದಿಯನ್ನು ತಮ್ಮ ಸಂಗಡ ಕೂಡಿಕೊಂಡು, ಎಣ್ಮೂರು ದೇವಸ್ಥಾನದ ದಾರಿಯನ್ನು ಹಿಡಿದರು.

ಹೊತ್ತು ಎರಡು ಮಾರು ಏರುವಷ್ಟರಲ್ಲಿ ಇತ್ತಂಡದವರೂ ಎದುರು ಬೀಳಲು, ಜಗಳಕ್ಕೆ ಪ್ರಾರಂಭವಾಯಿತು. ಇಕ್ಕೆಡೆಯವರು ಎಸೆದ ಬಾಣಗಳಿಂದ ಅನೇಕರು ಮಡಿದುಬಿದ್ದರು. ಮೂರುಮುಕ್ಕಾಲು ಗಳಿಗೆಯಲ್ಲಿ ಪಂಜರ ಕೇಮರ ಬಲ್ಲಾಳನು ಏರಿದ್ದ ಕುದುರೆಯ ಕಣ್ಣಿಗೆ ಬಾಣವು ತಗುಲಿ, ಬಲ್ಲಾಳನು ಕುದುರೆಯಿಂದ ಕೆಳಕ್ಕೆ ಬಿದ್ದು, ಯುದ್ಧರಂಗದಿಂದ ಓಡಿ ಹೋದನು. ಎಣ್ಮೂರಿನ ಕಡೆ ಯುದ್ಧ ಮಾಡುತ್ತಿದ್ದ ಮಂಜುಹೆಗ್ಗಡೆ ಎಂಬ ವೀರನು ಏಟು ತಗುಲಿ ಅಲ್ಲಿಯೇ ಮಡಿದುದನ್ನು ಕಂಡು ಎಣ್ಮೂರಿನವರು ಹಿಮ್ಮೆಟ್ಟಿ ಪಲಾಯನದ ಮಾರ್ಗವನ್ನು ನೋಡುತ್ತಿದ್ದರು. ಆ ಹೊತ್ತಿಗೆ ಸರಿಯಾಗಿ ಪೆರುಮಾಳು ಬಲ್ಲಾಳನೂ ಚೆಂದುಗಿಡಿಯೂ ತಮ್ಮ ತಮ್ಮ ಕುದುರೆಗಳನ್ನು ದೌಡಾಯಿಸಿಕೊಂಡು ಮುಂದೊತ್ತಿ ಬರಲು, ಎಣ್ಮೂರಿನವರು ಕಾಲಿಗೆ ಬುದ್ಧಿಹೇಳತೊಡಗಿದರು.

ಎಣ್ಮೂರಿನ ಜನಗಳು ನಿಂದು ನಿತ್ತರಿಸಲಾರದೆ ಹಿಂದೆಗೆದು ಓಡಿಹೋಗುವುದನ್ನು ಕೋಟಿ ಚೆನ್ನಯರು ಕಂಡು ತಮ್ಮ ಕತ್ತಿಯನ್ನು ಜಳಪಿಸುತ್ತ, ಇದಿರಿಸಿಕೊಂಡು ಬಂದವರನ್ನು ತಮ್ಮ ಖಡ್ಗಕ್ಕೆ

ಆಹುತಿಯನ್ನಾಗಿ ಮಾಡುತ್ತ, ಓಡಿಹೋಗುವವರನ್ನು ಮುಖ ತಿರುಗಿ ಯುದ್ಧ ಮಾಡಬೇಕೆಂದು ಹುರಿಗೂಳಿಸುತ್ತ, ಬಾಕಿಮಾರು ಗದ್ದೆಗೆ ಬಂದರು. ಅಷ್ಟರಲ್ಲಿ ಶತ್ರುಸೈನ್ಯದ ೨೦೦ ಮಂದಿ ಅವರನ್ನು ಮುಸುಕಿ ಮುತ್ತಿದರು.

ತಮ್ಮನ್ನು ಬಳಸಿಕೊಂಡು ಬರುತ್ತಿದ್ದ ಹಗೆಯವರನ್ನು ಕಂಡು ಕೋಟಿಚೆನ್ನಯರು ಬೆನ್ನಿಗೆ ಬೆನ್ನು ಕೊಟ್ಟು ನಿಂತು, ಸುತ್ತಮುತ್ತಲಿಂದ ಬರುತ್ತಿದ್ದ ಏಟುಗಳನ್ನು ಒಂದು ಗಳಿಗೆಯವರೆಗೆ ತಪ್ಪಿಸಿಕೊಂಡರು. ತರುವಾಯ ಅವರಿಬ್ಬರೂ ಕಬ್ಬಿನ ತೋಟಕ್ಕೆ ಬಿದ್ದ ಮರಿಯಾನೆಗಳಂತೆಯೂ, ಕುರಿ ಹಿಂಡನ್ನು ನುಗ್ಗಿದ ಹುಲಿ ಮರಿಗಳಂತೆಯೂ ಶತೃಗಳನ್ನು ಕೈಗೆ ಸಿಕ್ಕಂತೆ ಕೊಲ್ಲುತ್ತ ರಣಭಯಂಕರವಾಗಿ ಯುದ್ಧ ಮಾಡುತ್ತಿದ್ದಾಗ ಒಂದು ಚಿತ್ರಬಾಣವು ಕೋಟಿಯ ಮರ್ಮಸ್ಥಾನಕ್ಕೆ ತಗಲಿ ಅವನನ್ನು ಕಲ್ಲುಗೊಂಬೆಯಂತೆ ಮಾಡಿಬಿಟ್ಟಿತು.

ಅದನ್ನು ಕಂಡು ಚೆನ್ನಯನು "ಅಣ್ಣಾ । ಕಾಲು ತಿರುಗಿಸಿ, ಕಾಲು ತಿರುಗಿಸಿ" ಎಂದು ಚೀರಿದನು.

ಕೋಟಿ "ತಮ್ಮಾ, ತಲೆಗೆ ಏರಿದೆ ಚಿತ್ರಬಾಣ; ಎದೆಯನ್ನು ಸೀಳಿದೆ ಶಿಳೀಮುಖ; ಕಣ್ಣಿಗೆ ಬೀಸಿದೆ ಅರಸಿನ ಹುಡಿ" ಎಂದು ಹೇಳಿ, ಕೂಡಲೇ "ತಮ್ಮಾ ನೀನು ಯಾವಾಗಲೂ ಹಿಂದು ಮುಂದು ನೋಡುವುದಿಲ್ಲ. ಅಕೋ! ನಿನ್ನ ಬೆನ್ನು ಹಿಂದೆ" ಎಂದು ಕೈಸನ್ನೆ ಮಾಡಿದನು.

ಆ ಹೊತ್ತಿಗೆ ಸರಿಯಾಗಿ ಚೆಂದುಗಿಡಿಯು ಚೆನ್ನಯನ ಬೆನ್ನ ಹಿಂದೆ ಕಳ್ಳ ಹೆಜ್ಜೆಯಿಂದ ನುಸುಳಿಕೊಂಡು ತನ್ನ ಕತ್ತಿಯನ್ನು ಆತನ ಕೊರಳಿಗೆ ಇಟ್ಟಿದ್ದನು.

ತಕ್ಷಣವೇ ಚೆನ್ನಯನು ಮೋರೆಯನ್ನು ತಿರುಗಿಸಿ, ಇದ್ದಲ್ಲಿಂದ ಪುಟ ನೆಗೆದು, "ಅಣ್ಣಾ! ಇದು ನೆಗಳೆ; ಹರಿದು ಬಂದು ಕಚ್ಚುವ ಸ್ವಭಾವದ್ದು. ಕಣ್ಣಿಂದ ಕಾಣಲಿಕ್ಕಿಲ್ಲ. ಕೈಯಿಂದ ಮುಟ್ಟಲಿಕ್ಕಿಲ್ಲ ಎಂಬಂತೆ ಹಿಂದುಗಡೆಯಿಂದ ಬಂದಿದೆ" ಎಂದು ಹೇಳಿ, ತುಂಟ ಕುದುರೆಯಂತೆ ಕಾಲಿನಿಂದ ಒದೆದುಬಿಟ್ಟನು. ಆ ಏಟು ಸಿಡಿಲಿನಂತೆ ಚೆಂದುಗಿಡಿಯ ಪಾಲಕ್ಕೆ ತಾಗಿ ಅವನು ಅಲ್ಲಿಯೇ ಕಾಯಬಿಟ್ಟು ಸಂದನು.

ಚೆಂದುಗಿಡಿಯು ಸತ್ತದ್ದೇ ತಡ, ಅವನ ಸೈನಿಕರು ಕೊಳುಗುಳವನ್ನು ಬಿಟ್ಟು ಓಡತೊಡಗಿದರು. ಹೊತ್ತು ನೆತ್ತಿಗೆ ಬರುವಷ್ಟರಲ್ಲಿ ಯುದ್ಧವು ಮುಗಿದಿತ್ತು. ಯುದ್ಧದ ಜಯಧ್ವನಿಯು ಎಣ್ಮೂರು ಬೀಡಿಗೆ ಮುಟ್ಟಿತು. ಆಗ ದೇವಬಲ್ಲಾಳನು ಆ ವೀರರನ್ನು ಮಹಾಸಂಭ್ರಮದಿಂದ ಕಾಣುವುದಕ್ಕಾಗಿ ಪಟ್ಟದ ಜೋಡಿ ಕುದುರೆಗಳನ್ನೂ ಎರಡು ಪಲ್ಲಕ್ಕಿಗಳನ್ನೂ ಸಿಂಗರಿಸಿಕೊಂಡು ಕಾಲ್ನಡೆಯಾಗಿ ಹೋದನು; ದೇವಸ್ಥಾನದ ಮುಂದುಗಡೆಯ ಬಾಕಿಮಾರು ಗದ್ದೆಯಲ್ಲಿ ಗಾಯಗೊಂಡು ಬಿದ್ದಿದ್ದ ಕೋಟಿ, ಅವನ ಕಡೆಗಾಲದ ಸೇವೆ ಮಾಡುತ್ತಲಿದ್ದ ಚೆನ್ನಯ, ಇವರಿಬ್ಬರ ಹಿಂದುಗಡೆಯಲ್ಲಿ ಪಶ್ಚಾತ್ತಾಪದ ಮುಖಮುದ್ರೆಯಿಂದ ಮಾತಿಲ್ಲದೆ ನಿಂತಿದ್ದ ಪೆರುಮಾಳು ಬಲ್ಲಾಳ - ಈ ಮೂವರನ್ನು ಕಂಡನು. ಉಭಯ ಪಕ್ಷದ ಅನೇಕ ಸೈನಿಕರು ರಣರಂಗದಲ್ಲಿ ಮಡಿದು ಬಿದ್ದಿದ್ದರು. ಉಳಿದವರು ಪ್ರಾಣವನ್ನು ಕೈಯಲ್ಲಿ ಹಿಡಿದುಕೊಂಡು ಓಡಿ ಹೋಗಿದ್ದರು.

ದೇವಬಲ್ಲಾಳನು ಕೋಟಿಚೆನ್ನಯರನ್ನು ಕಂಡು, ಅವರ ಕಾಲಿಗೆ ಅಡ್ಡಬಿದ್ದು ನಮಸ್ಕರಿಸಿ, "ನನ್ನನ್ನೂ ನನ್ನ ಬೀಡನ್ನೂ ಕಾಪಾಡಿದ ಬಂಟರು ತಾವು. ತಮ್ಮ ಅಡಿಯಳಾದ ನನ್ನನ್ನು ಕಾಯಬೇಕು. ನನ್ನ ಹಣೆಯನ್ನು ಕಡಿದು ತಮಗೆ ಮಣಿಯನ್ನಾಗಿ ಇಟ್ಟರೂ ತಮ್ಮ ಉಪಕಾರವನ್ನು ತೀರಿಸಲಾರೆನು. ಇನ್ನು ತಾವು ಈ ರಣಭೂಮಿಯನ್ನು ಬಿಟ್ಟು ಈ ಪಲ್ಲಕ್ಕಿಗಳಲ್ಲಿ ಓಲಗವಾಗಿ, ಬೀಡಿನ ಚಾವಡಿಗೆ ದಯೆಮಾಡಿಸಿ, ನನ್ನ ರಾಜ್ಯವನ್ನೆಲ್ಲಾ ಉದ್ಧರಿಸಬೇಕು" ಎಂದು ಭಕ್ತಿಪೂರ್ವಕವಾಗಿ ಬೇಡಿಕೊಂಡನು.

ಅಷ್ಟರಲ್ಲಿ ಪೆರುಮಾಳು ಬಲ್ಲಾಳನು ಮುಂದಕ್ಕೆ ಬಂದು ತನ್ನ ಕೈಗಳನ್ನು ಹಣೆಯ ಮೇಲೆ ಇಟ್ಟುಕೊಂಡು, "ನಾನು ಸಾಕಿದ ಮರಿಗಳ ಮೇಲೆ ಕೈ ಮಾಡಿದ ಪಾಪಿ ನಾನು. ಈ ಪಾಪಕ್ಕೆ ಇದೇ ಪ್ರಾಯಶ್ಚಿತ್ತ" ಎಂದು ಹೇಳಿ, ತನ್ನ ಕೈಯಲ್ಲಿದ್ದ ಸುರಗಿಯನ್ನು ತನ್ನ ಹೊಟ್ಟೆಯೊಳಗೆ ಸುಚ್ಚಿಕೊಳ್ಳಹೋಗಲು, ಕೋಟಿಯು "ಬೇಡ ಬುದ್ಧಿ-ಕೈ ತಡೆಯಿರಿ" ಎಂದು ಸಂಜ್ಞೆ ಮಾಡಿದನು. ಅಷ್ಟರಲ್ಲಿಯೇ ಚೆನ್ನಯನು ಎದ್ದು ಪೆರುಮಾಳು ಬಲ್ಲಾಳನ ಕೈಯಲ್ಲಿದ್ದ ಸುರಗಿಯನ್ನು ಕಸಕೊಂಡನು.

ಇತ್ತ ಕೋಟಿಯ ಮೈರಕ್ತದ ಪ್ರವಾಹದಲ್ಲಿ ಆತನ ಪ್ರಾಣವು ತೇಲುಮುಳುಗುತ್ತಲಿತ್ತು. ಅವನು ತಮ್ಮನೊಡನೆ "ಚೆನ್ನಯ್ಯ, ನನ್ನ ಹೊತ್ತು ಬಂದಿದೆ; ನನ್ನನ್ನು ಈ ಶಿವಾಲಯದ ಇದಿರಾಗಿ

ಮಲಗಿಸಿಬಿಡು" ಎಂದು ಹೇಳಿ ಆಕಾಶದ ಕಡೆಗೆ ದೃಷ್ಟಿಯನ್ನು ತಿರುಗಿಸಿ, "ಚೆನ್ನಯ, ಈ ದಿನ ಸುಬ್ರಹ್ಮಣ್ಯ ಜಾತ್ರೆ, ದೇವರು ರಥಾರೋಹಣವಾಗಿದ್ದಾರೆ. ಗರುಡಪಕ್ಷಿಯು ತನ್ನ ರೆಕ್ಕೆಗಳನ್ನು ಬಿಚ್ಚಿ ಮಂಡಲಾಕಾರವಾಗಿ ರಥದ ಮೇಲೆಯೇ ಆಕಾಶದಲ್ಲಿ ಸುತ್ತುವಂತೆ ಈಗ ಕಾಯಬಿಟ್ಟು ಕೈಲಾಸಕ್ಕೆ ಹೋಗಲು ನನ್ನ ಆತ್ಮವು ಹಾರೈಸುತ್ತಲಿದೆ. ಆದರೆ ನನಗೆ ಸ್ವರ್ಗಕ್ಕೆ ನೀರು ಬಿಡುವ ಮುಂಚೆ ದೇವಸ್ಥಾನದಲ್ಲಿ ಪೂಜೆಯಾಗಲಿ" ಎಂಬ ಮಾತುಗಳನ್ನು ಮೆಲ್ಲನೆ ಉಸಿರೆಳೆದು ಹೇಳಿದನು.

ಸೂರ್ಯನು ಅಸ್ತಕ್ಕೆ ಹೋದನು. ದೇವಸ್ಥಾನದಲ್ಲಿ ಘಂಟಾನಾದವು ಕೇಳಿಸಿತು. ಪೂಜೆಗೆ ಪ್ರಾರಂಭವಾಯಿತು. ಮುಂಚಿನ ಕಾಲದಲ್ಲಿ ಎಂಥ ಭಯಂಕರ ಯುದ್ಧವು ನಡೆಯುತ್ತಲಿದ್ದರೂ ದೇವಸ್ಥಾನದ ಪೂಜಾ ವಿಧಿಗಳಿಗೆ ಇತ್ತಂಡದವರಿಂದಲೂ ಅಡ್ಡಿಯಾಗುತ್ತಿರಲಿಲ್ಲ.

ಪೂಜೆಯಾಗಿ ದೇವಸ್ಥಾನದ ಬ್ರಾಹ್ಮಣನು ಹೊರಕ್ಕೆ ತೆಗೆದುಕೊಂಡು ಬಂದ ಆರತಿಯನ್ನೂ ತೀರ್ಥವನ್ನೂ ಕೋಟಿಯು ಸ್ವೀಕರಿಸಿ ದೇವಬಲ್ಲಾಳನನ್ನು ಹತ್ತಿರಕ್ಕೆ ಕರೆದು "ಬುದ್ಧಿ, ಇನ್ನು ಮುಂದೆ ಸಹಸ್ರಾವಧಿ ಕಾಲ ಈ ಮಹಾಲಿಂಗೇಶ್ವರನ ಪೂಜೆಯು ಪಡುಮಲೆಯಲ್ಲಿ ಅರವಟ್ಟಿಗೆ ಇಟ್ಟಿರುವ ಆ ಬ್ರಾಹ್ಮಣರ ಕೈಯಿಂದ ನಡೆಯಿಸಬೇಕು" ಎಂದು ಅಭಯವನ್ನು ತೆಗೆದುಕೊಂಡು, "ಬಾಯಿಗೆ ತೀರ್ಥವನು ಹೊಯ್ದು ಬಿಡಿ" ಎಂದು ಸೂಚಿಸಿ ಬಾಯ್ದೆರೆದನು.

ದೇವಬಲ್ಲಾಳನೂ ಪೆರುಮಾಳು ಬಲ್ಲಾಳನೂ ಆತನ ಒಂದೊಂದು ಪಕ್ಕದಲ್ಲಿ ಕುಳಿತುಕೊಂಡು ಒಂದಿಷ್ಟು ಕೆಂದಾಳೆ ನೀರನ್ನು ಆತನ ಬಾಯಿಗೆ ಹೊಯ್ದರು. ಕೋಟಿಯು ಆ ಇಬ್ಬರು ಬಲ್ಲಾಳರ ಕೈಗಳನ್ನು ತನ್ನ ಕೈಗಳಿಂದ ಜೋಡಿಸಿ ಬಿಗಿ ಹಿಡಿದು, "ಮುಂದೆ ನೀವು ಕೈಗೂಡಿ ಬದುಕುವುದು ಒಳ್ಳೆಯದು" ಎಂದು ಹೇಳಿ, ಕಣ್ಣು ಮುಚ್ಚಿದನು; ಮುಚ್ಚಿದ ಕಣ್ಣು ಮತ್ತೆ ತೆರೆಯಲೇ ಇಲ್ಲ.

ಕೋಟಿಯು ಪರಂಧಾಮಕ್ಕೆ ಹೋಗುವುದನ್ನು ಕಂಡು ಚೆನ್ನಯನು "ಅಣ್ಣಾ! ನಿಮ್ಮನ್ನು ಬಿಟ್ಟು ನಾನೇತಕ್ಕೆ ಬಾಳಲಿ? ಹುಟ್ಟುವಾಗ ಒಟ್ಟಿಗೆ ಹುಟ್ಟಿದವರು ಹೋಗುವಾಗ ಒಟ್ಟಿಗೆ ಹೋಗಬೇಕಷ್ಟೆ. ಅಣ್ಣಾ, ನಾನು ನಿಮ್ಮ ಬೆನ್ನ ಹಿಂದೆಯೇ ಬಂದೆ" ಎಂದು ಹೇಳಿ, ಆ ದೇವಸ್ಥಾನದ ಮುಂದುಗಡೆಯಲ್ಲಿದ್ದ ಬಾಯಿಯ ಬಾಯಿಕಲ್ಲಿಗೆ ತನ್ನ ತಲೆಯನ್ನು ತಾಟಾಡಿಸಿದನು. ಚೆಂದುಗಿಡಿಯ ಕತ್ತಿಯ ತಿವಿತದಿಂದ ಮೊದಲೇ ರಕ್ತ ಹೋಗಿ ಜರ್ಝರಿತವಾದ ಆತನ ತಲೆಯ ಓಡಿನಿಂದ ಬಿಳಿ

ಮೆದುಳಿನ ಮಾಲೆಯೊಂದು ಹೊರಬಂದು, ದೇವಸ್ಥಾನದ ಬಲಿಪೀಠದಲ್ಲಿ ಇಟ್ಟಿದ್ದ ಮಲ್ಲಿಗೆಯ ಸರದಂತೆ ಕಲ್ಲಿನ ಮೇಲೆ ಬಿತ್ತು; ಅದರೊಂದಿಗೆ ಆತನ ಆತ್ಮವು ಮೇಲಕ್ಕೇರಿತು. ಕೂಡಲೇ ಆ ಶಿವಾಲಯದ ಒಳಗೆ ಉರಿಯುತ್ತಲಿದ್ದ ದೀಪಗಳೆಲ್ಲಾ ತಮ್ಮಷ್ಟಕ್ಕೆ ಆರಿ ಹೋದುವು; ಒಂದು ಗಳಿಗೆಯ ತನಕ ಗುಡುಗ ಮಿಂಚುಗಳು ತೋರಿದುವು; ಒನಕೆಯ ಧಾರೆಯಲ್ಲಿ ಮಳೆ ಹೊಯ್ದು ತಟ್ಟನೆ ತಾನಾಗಿ ನಿಂತು ಹೋಯಿತು.

ದೇವಬಲ್ಲಾಳನು "ಹಾ! ಹಾ! ವಿಧಿಯೇ ಇಂದಿಗೆ ನನ್ನ ರಾಜ್ಯದಲ್ಲಿದ್ದು ನನ್ನನ್ನು ಕಾಪಾಡಿದ ಆನೆಗಳೇ ಬಿದ್ದುಹೋದುವಲ್ಲಾ!" ಎಂದು ಮಮ್ಮಲ ಮರುಗಿದನು. ಆ ಎರಡು ಶವಗಳನ್ನು ಅಲಂಕರಿಸಿ, ತಾನು ತಂದಿದ್ದ ಪಲ್ಲಕ್ಕಿಗಳಲ್ಲಿ ಇರಿಸಿ, ಮಹಾಸಂಭ್ರಮದಿಂದ ಮೆರವಣಿಗೆ ಮಾಡಿಸಿ, ಬೀಡಿಗೆ ಕೊಂಡುಬಂದನು. ಮರುದಿನ ಹದಿನೆಂಟು ಪೇಟೆಯವರೂ ಒಂದುಗೂಡಿ ಜಾತಿ ವಿಧಿಗೆ ಅನುಸಾರವಾಗಿ ಶವಸಂಸ್ಕಾರವನ್ನು ನಡಿಸಿದರು.

ಯಾವ ಹೊತ್ತಿಗೆ ಕೋಟಿಯ ಆತ್ಮವು ಕಾಯವನ್ನು ಬಿಟ್ಟು ಹೋಯಿತೋ ಆ ವೇಳೆಗೆ ಸರಿಯಾಗಿ ಪಡುಮಲೆಯ ಬೀಡಿಗೆ ಬೆಂಕಿ ಬಿದ್ದು ಅದು ಸುಟ್ಟು ಬೂದಿಯಾಯಿತು. ವಿಚಾರ ಮಾಡಿದಲ್ಲಿ ಬೀಡಿನವರಿಗೆ ಬಹಳ ನಚ್ಚುಮೆಚ್ಚಿನವನಾಗಿ ನಡೆಯುತ್ತಿದ್ದ ಮುದುಕ ಸಾಯಿನ ಬೈದ್ಯನು ಬೀಡಿನೊಳಗೆ ಯಾರೂ ಇಲ್ಲದ್ದನ್ನು ಕಂಡು, ಪೂರ್ವದ್ವೇಷವನ್ನು ತೀರಿಸುವುದಕ್ಕಾಗಿ ಬೀಡಿಗೆ ಕಿಚ್ಚು ಹಾಕಿದನೆಂತಲೂ, ಬೆಂಕಿ ಹತ್ತಿದ ತರುವಾಯ ಬೀಡಿನಿಂದ ಬೇರೆಯವರ ಕಣ್ಮರೆಯಾಗಿ ತಪ್ಪಿಸಿಕೊಳ್ಳಲಾರದೆ ಆ ಬೆಂಕಿಯಲ್ಲಿಯೇ ಆತನು ಬಿದ್ದು ಹತನಾದನೆಂತಲೂ ಗೊತ್ತಾಯಿತು.

ಎಣ್ಮೂರು ದೇವಬಲ್ಲಾಳನು ಕೋಟಿಚೆನ್ನಯರನ್ನು ಸುಟ್ಟು ಶುದ್ಧ ಮಾಡಿಸಿದ ಸ್ಥಳಗಳಲ್ಲಿ ಅವರ ಸಮಾಧಿಗಳನ್ನು ಕಟ್ಟಿಸಿ, ಗರಡಿಗಳನ್ನು ಏರ್ಪಡಿಸಿದನು. ಆ ದೇವಸ್ಥಾನದ ನಿತ್ಯಾರ್ಚನೆಗೆ ಅಂದು ಕೋಟಿಚೆನ್ನಯರಿಗೆ ಕವಡೆ ಇಟ್ಟು ನಿಮಿತ್ತ ಹೇಳಿದ ಬ್ರಾಹ್ಮಣನನ್ನು ಕರೆತರಿಸಿ, ಅವನಿಗೆ ಉಂಬಳಿಯನ್ನು ಕೊಟ್ಟು, ಕೋಟಿಯ ಮಾತನ್ನು ನಡೆಸಿದನು. ಪೆರುಮಾಳು ಬಲ್ಲಾಳನು ಪಡುಮಲೆಗೆ ಹಿಂದೆರಳಿ ಹೋಗಿ ಅಲ್ಲಿ ಹೊಸ ಬೀಡನ್ನು ಕಟ್ಟಿಸಿ, ಕೋಟಿಚೆನ್ನಯರ ಕಂಬುಳದ ಗದ್ದೆಯ ಬಳಿಯಲ್ಲಿಯೇ ಅವರ ಗುಡಿಗಳನ್ನು ಅಂದವಾಗಿ ಮಾಡಿಸಿ, ಅಲ್ಲಿ ಅವರ ವಿಗ್ರಹಗಳನ್ನು

ಪ್ರತಿಷ್ಠೆ ಮಾಡಿ ತಾನು ಬದುಕಿರುವಷ್ಟು ಕಾಲ ದಿನಕ್ಕೆ ಮೂರು ಸಲ ಆ ಮೂರ್ತಿಗಳ ದರ್ಶನಕ್ಕೆ ಹೋಗಿಬರುತ್ತಿದ್ದನು.

ಕಾಲಗತಿಯಿಂದ ತುಳುನಾಡಿನಲ್ಲಿ ಬಲ್ಲಾಳರ ಸಂಸ್ಥಾನಗಳು ಆ ಮನೆತನದವರ ಕೈಬಿಟ್ಟುಹೋದರೂ, ಅವರ ಬೀಡುಗಳು ಪಾಳುಬಿದ್ದು ಮಣ್ಣುಗುಪ್ಪೆಯಾಗಿದ್ದರೂ, ನಾಲ್ಕು ಶತಮಾನಗಳ ಹಿಂದೆ ತುಳುನಾಡಿನಲ್ಲಿ ಬಿಲ್ಲರ ಪ್ರಭಾವವು ಹೇಗೆ ಇದ್ದಿತೆಂಬುದಕ್ಕೆ ಅನೇಕ ಗ್ರಾಮಗಳಲ್ಲಿ ಕೋಟಿಚೆನ್ನಯರಿಗಾಗಿ ಕಟ್ಟಿಸಿದ ಗರಡಿಗಳು ಈಗ ಸಾಕ್ಷಿ ಗುಡ್ಡೆಗಳಾಗಿವೆ. ಕಾಡಿ ಕಾಡಿ ಅಳಿದವರ ಹೆಸರು ಅಳಿಯಿತು; ನಾಡಿನ ಹಿತಕ್ಕಾಗಿ ಕಾದಾಡಿ ಕಾಯಬಿಟ್ಟು ಕೈಲಾಸಕ್ಕೆ ಸಂದವರ ಹೆಸರು ಉಳಿಯಿತು.